# ಜಯನಗರ ಸಾಮ್ರಾಜ್ಯ.



ಭುವನೇಶ್ವರೀ ಗ್ರಂಥಮಾಲೆ
ಬೆಳಗಾವಿ.



ಕರ್ನಾಟಕ ಸಿಂಹಾಸನಸ್ಥಾಪನಾಚಾರ್ಯ

ಶ್ರೀವಿದ್ಯಾರಣ್ಯರು.

ಭುವನೇಶ್ವರೀ ಗ್ರಂಥಮಾಲೆ- ಮೂರನೆಯ ಗ್ರಂಥ.

# ವಿಜಯನಗರ ಸಾಮ್ರಾಜ್ಯ.

ಬರೆದವರು

**ಬೋರ್ಕರ ಅನಂತ.**

**ಕುಲಕರಣಿ ಪ್ರಹ್ಲಾದ.**

೧೯೩೨

( ಪುಸ್ತಕದ ಒಡೆತನವು ಪ್ರಕಾಶಕರದು. )

**ಬೆಲೆ ಒಂದು ರೂಪಾಯಿ**

**ಇಳಿಸಿದ ಬೆಲೆ** ೦-೧೨-೦

# ಮುನ್ನುಡಿ.

ವಿಜಯನಗರ ಸಾಮ್ರಾಜ್ಯದ ನೆನಪಾದೊಡನೆ, ಕನ್ನಡಿಗರು ಆ ಸಾಮ್ರಾಜ್ಯದ ಮೂಲಕ ಮಾಡಿದ ಎರಡು ಘನವಾದಕಾರ್ಯಗಳು ಕಣ್ಣ ಮುಂದೆ ಕಟ್ಟುತ್ತವೆ. ಅವು ಯಾವುವೆಂದರೆ (೧) ಅದು ಇಡಿ ಹಿಂದುಸ್ಥಾನ ದಲ್ಲಿಯ ಹಿಂದೂ ಸಂಸ್ಕೃತಿಯನ್ನು ಸಂರಕ್ಷಿಸಿದ್ದು. (೨) ಪರಕೀಯರ ದೌಡನ್ನು ಎಲ್ಲಕ್ಕೂ ಪ್ರಥಮ ತಡೆದು ಓಡಿಯುವುದರಲ್ಲಿ ಯಶಸ್ವಿಯಾ ದುದಲ್ಲದೆ, ಸಾಮ್ರಾಜ್ಯವನ್ನು ಮಿತಿಮಿರಾರಿದ ಘನತೆಗೆ ಏರಿಸಿದ್ದು. ಆ ಸಾಮ್ರಾಜ್ಯವು ಹಿಂದೂ ಸಂಸ್ಕೃತಿಗೆ ಮಾಡಿದ್ದ ಉಪಕಾರದ ಸರಿ ಯಾದ ಕಲ್ಪನೆಯು ನಮಗೆ ಆಗಬೇಕಾದರೆ, ವಿಜಯನಗರ ಸಾಮ್ರಾ ಜ್ಯವು ಸ್ಥಾಪಿತವಾಗದಿದ್ದರೆ, ಧರ್ಮದ ಗಟ್ಟಿಮುಟ್ಟಿಯಾದ ತಳಹದಿಯ ಮೇಲೆ ಸ್ಥಿರವಾಗಿ ಸ್ಥಾಪಿತವಾಗದಿದ್ದರೆ ನಮ್ಮ ಹಿಂದುಸ್ಥಾನದ ಅವ ಸ್ಥೆಯು ಏನಾಗುತ್ತಿತ್ತೆಂಬುವದ ಚಿತ್ರವನ್ನು ಮನಸ್ಸಿನಲ್ಲಿ ತರಬೇಕು. ಶಿಕಂದರ ಬಾದಶಹನ ಕಾಲದಿಂದ ಹಿಂದುಸ್ಥಾನದ ಮೇಲೆ ಪರಕೀಯರ ದಾಳಿಗಳು ನೂರಾರು ಆದವು. ಆದರೆ ಅವುಗಳಲ್ಲೊಂದರಲ್ಲಿಯೂ ನಮ್ಮ ಹಿಂದೂ ಜನರಿಗೆ ಹೇಳತಕ್ಕ ಯಶಸ್ಸು ದೊರೆಯಲಿಲ್ಲವೆಂದು ದುಃಖದಿಂದ ಹೇಳಬೇಕಾಗುತ್ತದೆ. ಹಾಗಾಗುವುದಕ್ಕೆ ಕಾರಣಗಳು ಏನೇ ಇರಲಿ, ನಮಗೆ ಅಪಜಯವುಂಟಾದುದೇನೂ ಸುಳ್ಳಲ್ಲ. ಅದರ ಮೂಲಕ, ಇಡೀ ಉತ್ತರ ಹಿಂದುಸ್ಥಾನದ ನಡೆನುಡಿಗಳಲ್ಲಿ ವಿಲಕ್ಷಣವಾದ ಕ್ರಾಂತಿಯಾ ಯಿತು. ಉಡಿಗೆ ತೊಡಿಗೆ, ಆಚಾರವಿಚಾರ, ರೀತಿನೀತಿಗಳೆಲ್ಲವುಗಳಲ್ಲಿ ಮುಸಲ್ಮಾನರ ಅನುಕರಣವು ಸ್ವಾಭಾವಿಕವಾಗಿಯೇ ಮಾಡಲ್ಪಟ್ಟಿತು. ಮತ್ತು ವಿಜಯನಗರ ಸಾಮ್ರಾಜ್ಯವು ಸ್ಥಾಪನವಾಗದಿದ್ದರೆ, ಇಂದು ಈಗ ನಮ್ಮ ಕಣ್ಣಿಗೆ ತೋರುವ ಹಿಂದೂ ಜನರ ಹಿಂದುಸ್ಥಾನವು ಉಳಿ ಯುತ್ತಲೇ ಇರಲಿಲ್ಲ. ಇಂಥ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಕೇವಲ ಆರ್ಯ ಸಂಸ್ಕೃತಿಯ ರಕ್ಷಣೆಯ ಉದಾತ್ತವಾದ ಉದ್ದೇಶವನ್ನೇ ಇಟ್ಟುಕೊಂಡು ಕಟ್ಟಲ್ಪಟ್ಟ ವಿಜಯನಗರ ಸಾಮ್ರಾಜ್ಯದ ಉಪಕಾರವನ್ನು ಇಡೀ ಹಿಂದು

ಸ್ಥಾನವು ಎಷ್ಟೆಂದು ಸ್ಮರಿಸಬೇಕು ? ಇದಾಯಿತು ಹಿಂದೂ ಸಂಸ್ಕೃತಿಯ ರಕ್ಷಣೆ. ಆದರೆ, ಈ ರಕ್ಷಣಕ್ಕೆ ಮೂಲಾಧಾರವು ಸಾಮ್ರಾಜ್ಯಸ್ಥಾಪನೆಯು. ಕ್ಷತ್ರಿಯತ್ವದ ಬೆಂಬಲವಿಲ್ಲದೆ ಸಂಸ್ಕೃತಿಯ ರಕ್ಷಣೆಯಾಗದು. ಸುಮಾರು ೧೩-೧೪ ನೂರು ವರ್ಷಗಳಿಂದ ಹಿಂದುಸ್ಥಾನವು ಪರಕೀಯರ ದಾಳಿಗಳಿಂದ ಜಜ್ಜಲ್ಪಟ್ಟು ನುಚ್ಚುನುರಿಯಾಗಿತ್ತು. ಅವರನ್ನು ತಡೆದು ಹಿಡಿಯಲು ಸಾಮರ್ಥ್ಯವು ಉತ್ತರ ಹಿಂದುಸ್ಥಾನದಲ್ಲಿ ಉಳಿದಿರಲಿಲ್ಲ. ಆ ಭಾಗದಲ್ಲಿ ಬಲಿಷ್ಠವಾದ ಒಂದೂ ಹಿಂದೂರಾಜ್ಯವು ಉಳಿದಿರಲಿಲ್ಲ. ಇಡೀ ಉತ್ತರ ಹಿಂದುಸ್ಥಾನವು ಮುಸಲ್ಮಾನರ ವಶವಾಗಿತ್ತು. ದಕ್ಷಿಣ ಹಿಂದುಸ್ಥಾನದಲ್ಲಿಯೂ ದೇವಗಿರಿ ವರಂಗಲ್ಲು ಮುಂತಾದ ಬಲಾಢ್ಯ ಸಾಮ್ರಾಜ್ಯಗಳು ಮುಸಲ್ಮಾನರ ಶೂರತನಕ್ಕೆ ಮತ್ತು ಕ್ರೂರತನಕ್ಕೆ ತುತ್ತಾಗಿದ್ದುವು. ಇಂಥ ದುರ್ಧರ ಪ್ರಸಂಗ! ಶ್ರೀವಿದ್ಯಾರಣ್ಯರ ದಿವ್ಯತೇಜಸ್ಸಿನಿಂದಲೂ ಹುಕ್ಕಬುಕ್ಕರ ಅಪ್ರತಿಮವಾದ ಶೂರತನದಿಂದಲೂ ವಿಜಯನಗರದ ಸಾಮ್ರಾಜ್ಯವು ಸ್ಥಾಪನವಾದದ್ದು. ಇಂತಹ ಭಯಂಕರ ಪ್ರಸಂಗದಲ್ಲಿ; ಎಂದ ಬಳಿಕ, ಇತಿಹಾಸದಲ್ಲಿ ಇದರ ಮಹತ್ವವನ್ನು ಎಷ್ಟೆಂದು ಬಣ್ಣಿಸಬೇಕು ? ನೆನಪಿನಲ್ಲಿಡತಕ್ಕ ಮತ್ತೊಂದು ವಿಶೇಷವೆನ್ನೆಂದರೆ, ಕರ್ನಾಟಕದ ಪುಣ್ಯದಿಂದ-ಭರತಭೂಮಿಯ ಪುಣ್ಯದಿಂದ ಕರ್ನಾಟಕವು ಸ್ಥಾಪಿಸಿದ ಈ ಘನವಾದ ಸಾಮ್ರಾಜ್ಯಕ್ಕೆ ಒಬ್ಬರಿಗಿಂತ ಒಬ್ಬರು ಉತ್ತಮರಾದ ಅರಸರು ಹಲವರು ದೊರೆತರು! ಹಾಗಾಗದೆ ಶ್ರೀ ಶಿವಾಜಿಮಹಾರಾಜರು ಸ್ಥಾಪಿಸಿದ ಮರಾಠಾ ಸಾಮ್ರಾಜ್ಯಕ್ಕೆ ದೊರೆತಂತೆ ದುರ್ಬಲ ಅಥವಾ ವಿಷಯಾಸಕ್ತ ಅರಸರು ಈ ಕರ್ನಾಟಕದ ಸಾಮ್ರಾಜ್ಯಕ್ಕೂ ದೊರೆತಿದ್ದರೆ, ಅದೂ ಶ್ರೀ ಶಿವಾಜಿಮಹಾರಾಜರು ಕಟ್ಟಿದ ಸಾಮ್ರಾಜ್ಯದಂತೆ ಬೇಗನೆ ಉರುಳಿ ಬೀಳುತ್ತಿತ್ತು! ಕರ್ನಾಟಕದಲ್ಲಿ ಹಾಗೆ ಆಗಲಿಲ್ಲ. ಇಷ್ಟೇ ಅಲ್ಲ; ಕಲ್ಪನಾತೀತವಾದ ವೈಭವದಿಂದ ಅದು ೨೦೦—೨೫೦ ವರ್ಷಗಳ ವರೆಗೆ ಹಿಂದುಸ್ಥಾನದ ವಿಜಯಧ್ವಜವನ್ನು ಎತ್ತಿಹಿಡಿಯಿತು. ಶ್ರೀ ಶಿವಾಜಿಮಹಾರಾಜರು ಉಜ್ವಲವಾದ ದೇಶಾಭಿಮಾನದಿಂದ ರಾಜಕಾರಣದಲ್ಲಿ ಏರ್ಪಡಿಸಿದ ಅನೇಕ ಸುಧಾರಣೆಗಳ ಬೇರುಗಳನು

ನಾವು ನಮ್ಮ ಈ ಕರ್ನಾಟಕ ಸಾಮ್ರಾಜ್ಯದಲ್ಲಿ ಕಾಣಬಹುದು.

ಆದರೆ, ಇಂಥ ಈ ಸಾಮ್ರಾಜ್ಯದ ನೆನಪು ಮಾತ್ರ ಅದನ್ನು ಸ್ಥಾಪನ ಮಾಡಿದ ಕನ್ನಡಿಗರಿಗೆಯೇ ಉಳಿದಿರುವದಿಲ್ಲವೆಂಬುದು ಅತ್ಯಂತ ಲಜ್ಜಾಸ್ಪದವಾದ ಮಾತಲ್ಲವೆ? ಮರೆತುಬಿಟ್ಟ ಈ ಸಾಮ್ರಾಜ್ಯವನ್ನು ನಮಗೆ ನೆನಪು ಮಾಡಿಕೊಡಬೇಕು ಪರಕೀಯರು! ನೆನಪು ಮಾಡಿಕೊಟ್ಟರೂ ಮಾಡಿಕೊಳ್ಳದಿರುವಂಥ ಕೃತಘ್ನರು ಕನ್ನಡಿಗರಾದ ನಾವು! ಇದೇ ಸಾಮ್ರಾಜ್ಯವು ಮತ್ತೊಂದು ಪ್ರಾಂತದವರ ಪಾಲಿಗೆ ಬಂದಿದ್ದರೆ, ಅವರು ಇಡೀ ಭರತಖಂಡದಲ್ಲೆಲ್ಲ ಅದರ ವಿಜಯದುಂದುಭಿಯನ್ನು ಮೊಳಗಿಸಿಬಿಡುತ್ತಿದ್ದರು. ಅಷ್ಟೇಕೆ? ಅನ್ಯ ಪ್ರಾಂತದವರು ಕೈಕೊಂಡ ಈ ತರಹದ ಪ್ರಯತ್ನಗಳನ್ನು ಕರ್ನಾಟಕದವರೇ ಕೊಂಡಾಡಿ ಹರಸುತ್ತಾರೆ. ಅದೇ ಕರ್ನಾಟಕದವರು ತಮ್ಮ ಸಾಮ್ರಾಜ್ಯದ ನೆನಪು ಕೊಟ್ಟವರಿಗೆ ಮೂಗು ಮುರಿಯುತ್ತಾರೆ ಇದಕ್ಕೆನ್ನಬೇಕು ಅಭಿಮಾನಶೂನ್ಯತೆಯ ಪರಮಾವಧಿ! ಆದರೆ, ನಮ್ಮ ಸುದೈವದಿಂದ ಇತ್ತೀಚಿಗೆ ಸ್ವಲ್ಪ ಸುಚಿಹ್ನಗಳು ತೋರ ಹತ್ತಿವೆ. ಅಲ್ಲಲ್ಲಿ ಕರ್ನಾಟಕತ್ವದ ಉದಯವು ಕಿಂಚಿತ್ ಕಾಣಲಾರಂಭಿಸಿದೆ. ಆದುದರಿಂದಲೇ, ವಿಜಯನಗರ ಸಾಮ್ರಾಜ್ಯವು ಸ್ಥಾಪನವಾದಂದಿನಿಂದ ೬೦೦ ವರುಷಗಳಾಗುವ ೧೯೩೬ ನೆಯ ಇಸ್ವಿಯಲ್ಲಿ ಬಹಳ ದೊಡ್ಡ ಪ್ರಮಾಣದಿಂದ ಪ್ರತ್ಯಕ್ಷ ವಿಜಯನಗರದಲ್ಲಿ ಅಂದರೆ ಹಾಳುಹಂಪೆಯಲ್ಲಿ ಸ್ಮಾರಕೋತ್ಸವಜರುಗಿಸುವ ಮಾತಗಳುಹೊರಟಿವೆ. ದೇಶದಪರಿಸ್ಥಿತಿಯು ಅನುಕೂಲವಾದರೆ ಅದು ಯಶಸ್ವಿಯಾಗಿ ಜರುಗಬಹುದೆಂದು ಆಶೆಯಿದೆ. ಕರ್ನಾಟಕಸ್ಥರು ಬೆಳಗಾವಿಯಲ್ಲಿ ನೆರೆದ ಕಾಂಗ್ರೆಸಿನ ಕಾಲದಲ್ಲಿ ವಿಜಯನಗರಸ್ಮಾರಕ ಪಟ್ಟಣವೊಂದನ್ನು ಕಟ್ಟಿ ಇಂಥಉಜ್ವಲವಾದ ಸ್ಮರಣೆಗೆಮೊದಲು ಮಾಡಿರುವರು. ಈಗ ಬೆಳಗಾವಿಯವರು ಈ ಭುವನೇಶ್ವರಿ ಗ್ರಂಥಮಾಲೆಯನ್ನು ಹೊರಡಿಸಿ ಮುಂದೆ ಮಾಡಲಿಚ್ಛಿಸುವ ಆ ಮಹೋತ್ಸವಕ್ಕೆ ಪ್ರಸ್ತಾವನೆಯನ್ನು ಮಾಡಿದುದಕ್ಕೋಸ್ಕರ ಅವರನ್ನು ಅಭಿನಂದಿಸಬೇಕಾಗಿದೆ ಇರಲಿ,

ಹಾಳು ಹಂಪೆ! ಹಂಪೆಗೆ 'ಹಾಳು' ಎಂಬ ವಿಶೇಷಣವನ್ನು ಕೊಡು

ವಾಗ ನಮ್ಮ ಹೊಟ್ಟೆಯಲ್ಲಿ ಕಲಿವಿಲಿಯಾಗುತ್ತದೆ! ಆ ಹಾಳು ಹಂಪೆ ಯಲ್ಲಿ ಬೀಳುಬಿದ್ದ ಕನ್ನಡಿಗರ ಹೃದಯವನ್ನು ಹಸನಾಗಿ ಹರಗಿ ಫಲ ದ್ರೂಪವಾಗಿ ಮಾಡುವ ವಿಲಕ್ಷಣ ಶಕ್ತಿಯು ತುಂಬಿರುವುದೆಂಬದನ್ನು ಎಷ್ಟು ಜನರು ಬಲ್ಲರು! ಕನ್ನಡಿಗರೇ, ಒಮ್ಮೆ ಆ ಹಂಪೆಯನ್ನು ನೋಡಿ ಬನ್ನಿರಿ. ಎಂದರೆ ನೀವು ಹೊಸ ಮನುಷ್ಯರಾಗಿ ಒರುವಿರೆಂದು ಎದೆಗೆ ಕೈ ಗೊಟ್ಟು ಹೇಳುತ್ತೇವೆ. “ಹಂಪೆಗೆ ಹೋಗುವದಕ್ಕಿಂತ ಕೊಂಪೆಯಲ್ಲಿರು ವುದು ಲೇಸು” ಎಂಬುದು ಹೇಡಿ ಕನ್ನಡಿಗರ ಗಾದೆಯ ಮಾತು. ಕಾಲಿ ದ್ದವನು ಹಂಪೆಗೆ ಹೋಗಬೇಕು, ಕಣ್ಣಿದ್ದವನು ಕನಕಗಿರಿಗೆ ಹೋಗಬೇಕು’ ಎಂಬಹಳೆಯದೇ ಗಾದೆಯ ಮಾತು ಈಗಿನ ಹುರುಪಿನ ಕನ್ನಡಿಗರ ಗಾದೆಯ ಮಾತು. ಈ ಚಿಕ್ಕ ಪುಸ್ತಕಗಳನ್ನು ಓದಿ ಆ ವಿಜಯನಗರ ಸಾಮ್ರಾಜ್ಯದ ಚರಿತೆಯನ್ನೂ ವೈಭವವನ್ನೂ ಅರಿತುಕೊಳ್ಳಿರಿ. ನಡೆಯಿರಿ ಹಂಪೆಗೆ, ಕಾಲು ದಣಿ ಹಂಪೆಯಲ್ಲಿ ತಿರುಗಾಡಿ ಮನದಣಿ ಆನಂದಪಡಿರಿ. ಈ ಚಿಕ್ಕ ಪುಸ್ತಕ ಗಳ ಉದ್ದೇಶವು ಇಷ್ಟೇ ಹೆಚ್ಚಿನದಿಲ್ಲ.

| ಧಾರವಾಡ<br>೨೨-೬-೧೯೩೨ | **ಆಲೂರ ವೆಂಕಟರಾಯ.** |
|---|---|

## ಬರೆಹಗಾರರ ಒಂದೆರಡು ನುಡಿ.

ಉನ್ನತಿಯನ್ನು ಬಯಸುವ ಪ್ರತಿಯೊಬ್ಬ ಮನುಷ್ಯನು, ಪ್ರತಿಯೊಂದು ಜನಾಂಗವು, ದೇಶವು, ರಾಷ್ಟ್ರವು ತನ್ನ ಪೂರ್ವಜರ ಚರಿತ್ರೆಯನ್ನು ತಿಳಿದುಕೊಳ್ಳುವುದು ಅತ್ಯಾವಶ್ಯಕ. ಆ ಪೂರ್ವಜರ ವೈಭವವನ್ನು ನೆನೆದು ನೆನೆದು ಕಣ್ಣೀರು ತಂದು "ಅಯ್ಯೋ, ನನ್ನ ಪೂರ್ವವೈಭವವು ಹೀಗಿದ್ದಿತಲ್ಲ ಈಗೇನಾಯಿತು ನನ್ನಗತಿ!" ಎಂದು ಅಳುವುದಕ್ಕಲ್ಲ, ಅದನ್ನು ತಿಳಿದುಕೊಳ್ಳುವುದು. "ನಾವು ಹೇಗಿದ್ದರೇನಾಯಿತು. ನಮ್ಮ ಪೂರ್ವಜರು ಅಂಥವರಿದ್ದರು ಇಂಥವರಿದ್ದರು ನಾವು ಅವರ ವಂಶದವರು ನಾವೇನು ಸಾಮಾನ್ಯರೆ." ಎಂದು ಬಡಾಯಿಕೊಚ್ಚಿ ಕೈಮುಚ್ಚಿಕೊಂಡು ಕುಳಿತುಕೊಳ್ಳುವುದಕ್ಕೂ ಅಲ್ಲ. ನಮ್ಮ ಪೂರ್ವಜರು ಇಷ್ಟು ವೈಭವಶಾಲಿಗಳಿದ್ದರು ಅವರ ವಂಶಜರಾದ ನಮಗೆ ಈ ಕೀಳು ಸ್ಥಿತಿಬಂದಿದೆ. ಈ ಕೀಳುಸ್ಥಿತಿ ಬರುವುದಕ್ಕೆ ನಾವೇ ಕಾರಣರು. ನಾವೂ ಪ್ರಯತ್ನಮಾಡಿದರೆ ಇಂದಿಲ್ಲ ನಾಳೆ, ನಾವಿಲ್ಲ ನಮ್ಮ ವಂಶಜರು ಪುನಃ ಆ ಉನ್ನತ ಸ್ಥಿತಿಗೆ-ಅದಕ್ಕೂ ಉನ್ನತವಾದ ಸ್ಥಿತಿಗೆ ಮುಟ್ಟಬಹುದು, ಎಂದು ಆ ದಿಶೆಯಲ್ಲಿ ಪ್ರಯತ್ನ ಮಾಡುವುದಕ್ಕೆ. ಪೂರ್ವಜರು ಯಾವುದೊಂದು ತಪ್ಪುದಾರಿ ಹಿಡಿದು ಅವನತಿಯನ್ನೈದಿದ್ದರೆ ಆ ತಪ್ಪು ದಾರಿಯನ್ನು ತಿಳಿದುಕೊಂಡು ಆ ತಪ್ಪು ತಮ್ಮಿಂದಾಗದಂತೆ ಎಚ್ಚರದಿಂದಿರುವುದಕ್ಕೆ. ಪ್ರತಿಯೊಂದು ರಾಷ್ಟ್ರದವರು ಇತಿಹಾಸಕ್ಕೆ ಅಷ್ಟೊಂದು ಮಹತ್ವ ಕೊಡುತ್ತಿರುವುದು ಈ ದೃಷ್ಟಿಯಿಂದಲೆ.

ಅವನತಿಯ ಕೊನೆಯ ಮೆಟ್ಟಲನ್ನು ಕಂಡು ನಾವು ಮಾತ್ರ ದೇಹಧಾರಣ ಮಾಡಿದವರಿಗೆ ಅವರ ಪೂರ್ವಜರ ವೈಭವಶಾಲಿಯಾದ ಚರಿತ್ರೆಯ ನೆನಪು ಅಮೃತಸಿಂಚನೆ ಮಾಡಿದಂತೆ. ನಾಮನಿರ್ದೇಶಕ್ಕೂ ಆಸ್ಪದವಿಲ್ಲದೆ ಛಿನ್ನಭಿನ್ನವಾದ ಕನ್ನಡಿಗರು ಮತ್ತೆ ತಲೆಯೆತ್ತಿ ನಡೆಯಬೇಕಾದರೆ ಅವರಿಗೆ ತಮ್ಮ ಪ್ರಾಚೀನ ವೈಭವದ, ಪ್ರಾಚೀನ ವಿಭೂತಿಗಳ ದರ್ಶನ

ವನ್ನು ಮಾಡಿಸುವ ಇತಿಹಾಸಗಳು ಅನೆಷ್ಟಿದ್ದರೂ ಬೇಕಾಗಿವೆ. ಆದರೆ ದುರ್ದೈವದಿಂದ ಅಂತಹ ಇತಿಹಾಸಗಳು ಇನ್ನೂವರೆಗೆ ಒಂದೂ ಬರೆಯಲ್ಪಟ್ಟಿಲ್ಲ. ಇದೀಗ ತಾವು ತಲೆಯೆತ್ತಿ ನಡೆಯಬೇಕಾದರೆ ತಮ್ಮ ಪ್ರಾಚೀನ ವಿಭೂತಿಗಳ ಪೂಜೆಯು ಅತ್ಯಾವಶ್ಯಕವೆಂಬರಿವು ಕನ್ನಡಿಗರಲ್ಲಿ ಮೊಳೆತಿದೆ. ಆ ವಿಭೂತಿ ಪೂಜೆಯ ಪ್ರಯತ್ನವೂ ಅಲ್ಪಸ್ವಲ್ಪ ನಡೆದಿದೆ. ಆ ವಿಭೂತಿ ಸ್ಮರಣೆಗೆಂದು ಮಾಡಿದುದೊಂದು ಪ್ರಯತ್ನವಿದು.

ಇದೇನು ವಿಜಯನಗರ ಸಾಮ್ರಾಜ್ಯದ ಸಂಪೂರ್ಣ ಇತಿಹಾಸವಲ್ಲ. ಅಂತಹ ಸಂಪೂರ್ಣ ಇತಿಹಾಸವು ಇನ್ನು ಮುಂದೆ ಹುಟ್ಟಬೇಕಾಗಿದೆ ವೈಭವದ ಶಿಖರಕ್ಕೇರಿದ ಆ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಾಗಿ ೬೦೦ ವರ್ಷಗಳಾಗುತ್ತವೆ ೧೯೩೬ ನೆಯ ಇಸ್ವಿಗೆ. ಅಷ್ಟರಲ್ಲಿ ಸಾಮಾನ್ಯ ಕನ್ನಡಿಗರಿಗೂ ಆ ಸಾಮ್ರಾಜ್ಯದ ಅಲ್ಪಪರಿಚಯವಾಗಿ ಉತ್ಸಾಹದಿಂದವರು ಆ ಸಾಮ್ರಾಜ್ಯ ಸ್ಥಾಪನೆಯ ದಿನವನ್ನಾಚರಿಸಲೆಂಬುದನ್ನು ಮನದಲ್ಲಿಟ್ಟುಕೊಂಡು ಬರೆದುದಾಗಿದೆ ಈ ಚರಿತ್ರೆಯನ್ನು. ಆ ಕಾಲಕ್ಕೆ ಅಂತಹ ಸಂಪೂರ್ಣವಾದ ಇತಿಹಾಸವೊಂದನ್ನು ಸಿದ್ಧಪಡಿಸಿ ಆ ಮಹಾತ್ಮನಿಗೆ, ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ ಮಾಧವಮುನಿಗೆ ಅರ್ಪಿಸುವ ಭಾರವನ್ನು ಕನ್ನಡಿಗರಾರಾದರೂ ಕೈಕೊಳ್ಳಲೆಂಬುದ್ದೇಶದಿಂದ, ಅಂತಹರಿಗೆ ಹುರುಪು ಹುಟ್ಟಲಿಕ್ಕೆ ಅಪಸ್ವರದಿಂದ ಹಾಡಿದ ಹಾಡಿದು; ಆ ಮಹಾತ್ಮನ ಪೂಜೆಗೆಂದು ತಿರಿದು ತಂದ ಕಾಡುಹೂವೊಂದು. ಯಾವ ಹೂವಾದರೇನು ಎಂಥ ಸ್ವರವಾದರೇನು ಭಕ್ತಿಯಿಂದ ಶ್ರೀಕೃಷ್ಣಾರ್ಪಣವೆಂದರೆ ಆ ಮಹಾತ್ಮನಿಗೆಯೆ ಹೋಗಿ ಮುಟ್ಟುವುದು. ಆ ಮಹಾತ್ಮನದನ್ನು ಆದರದಿಂದ ಸ್ವೀಕರಿಸುವನೆಂಬ ನಂಬಿಗೆಯನಿಟ್ಟುಕೊಂಡೇ ಅರ್ಪಿಸಿದ ಈ ಕಾಡು ಹೂವನ್ನು ಆ ಮಹಾತ್ಮನ ಪದತಲದಲ್ಲಿ.

ವಿಜಯನಗರದ ಇತಿಹಾಸವು ಇನ್ನೂ ಅಧಿಕೃತವಾಗಿ ಬರೆಯಲ್ಪಟ್ಟಿಲ್ಲ. ನಮ್ಮ ದುರ್ದೈವದಿಂದ ಆ ಸಾಮ್ರಾಜ್ಯದ ಬಗ್ಗೆ ತಿಳಿಯತಕ್ಕಷ್ಟು ಸಂಗತಿಗಳು ತಿಳಿದುಬಂದಿಲ್ಲ. ಗೊತ್ತಾದ ಸಂಗತಿಗಳ ಬಗ್ಗೆಯೂ

ಮತಭೇದವಿದೆ. ಇಲ್ಲಿ ಮುಖ್ಯವಾಗಿ ಎಲ್ಲರೂ ಒಪ್ಪಿಕೊಂಡಂಥ ಸಂಗತಿಗಳನ್ನೇ ಆಯ್ದುಕೊಂಡಿರುತ್ತೇವೆ. ಮತಭೇದವಿರುವಲ್ಲಿ ಬಹುಜನರು ಒಪ್ಪಿಕೊಂಡಂಥವುಗಳನ್ನು ಆಯ್ದು, ಕೆಲವೆಡೆ ಆಖ್ಯಾಯಿಕೆಗಳನ್ನು ಸಾಣೆಗೆ ಹಚ್ಚಿ ಸ್ವಲ್ಪ ಉಜ್ಜಿ ಬರೆದಿರುವೆವು ಭುವನೇಶ್ವರೀ ಗ್ರಂಥಮಾಲೆಯ ಸಂಪಾದಕರಾದ ಬಿ ಕಲ್ಯಾಣಶರ್ಮರು ಗ್ರಂಥ ಬರೆವುದಕ್ಕೆ ಪ್ರೋತ್ಸಾಹ ಕೊಟ್ಟು ಅದಕ್ಕೆ ಬೇಕಾದ ಸಾಮಗ್ರಿಗಳನ್ನು ಒದಗಿಸಿ ಕೊಟ್ಟು ತಮ್ಮ ಮಾಲೆಯಲ್ಲಿದನ್ನು ಪ್ರಕಟಿಸಿದರು. ನಮ್ಮ ಬಿನ್ನಹಕ್ಕೆ ಒಪ್ಪಿಕೊಂಡು ಆಲೂರ ವೆಂಕಟರಾಯರು ಮುನ್ನುಡಿಯನ್ನು ಬರೆದರು ಇವರಿಗೆ ನಾವು ಋಣಿಗಳಾಗಿರುವೆವು. ಗ್ರಂಥ ಬರೆವಲ್ಲಿ ಸಹಾಯಕವಾದ ಗ್ರಂಥಗಳ ಕರ್ತರನ್ನು ನಾವಿಲ್ಲಿ ಅಭಿನಂದಿಸದಿರಲಾರೆವು. ಈ ಪುಸ್ತಕವನ್ನೋದಿ ಕರ್ಣಾಟಕದ ಸಾಮಾನ್ಯ ಜನತೆಗೆ ವಿಜಯನಗರ ಸಾಮ್ರಾಜ್ಯದ ಕಲ್ಪನೆಯು ಒಂದಿಷ್ಟಾದರೂ ಆಗಿ ಆ ಸಾಮ್ರಾಜ್ಯದ ಪುಣ್ಯಸ್ಮರಣೆಯು ಕಾರ್ಯರಲ್ಲಿ ಸ್ವಲ್ಪವಾದರೂ ನೆರವಾದಲ್ಲಿ ನಾವು ಮಾಡಿದ ಶ್ರಮವು ಸಾರ್ಥಕವಾದಂತಾಗುವುದು.

---

# ಪ್ರಕಾಶಕರ ಮಾತು.

ಈ ವಿದ್ಯಾರಣ್ಯ ಪುಣ್ಯತಿಥಿಗೆ ನಮ್ಮ ಮಾಲೆಯು ಹೊರಟು ವರುಷವಾಯಿತು. ಚಂದಾದಾರರಿಗೆ ಮೊದಲ ವರ್ಷದ ನಾಲ್ಕು ಪುಸ್ತಕಗಳನ್ನು ಸಲ್ಲಿಸಿದಂತಾಯಿತು. ೩--೪ ನೆಯ ಗ್ರಂಥಗಳು ಈ ಮೊದಲೇ ಪ್ರಸಿದ್ಧವಾಗಿ ಈ ದಿವಸ ಹೊಸ ವರುಷದ ಮೊದಲನೆಯ ಗ್ರಂಥವು ಹೊರಡಬೇಕಾಗಿತ್ತು. ಆದರೆ ಈ ಗ್ರಂಥಗಳನ್ನು ಬರೆಯಲಿಕ್ಕೆ ಸಹಾಯಕವಾದ ಕೆಲವು ಗ್ರಂಥಗಳು ವೇಳೆಗೆ ಸರಿಯಾಗಿ ದೊರೆಯಲಿಲ್ಲ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ದಿವಸವೆ ಗ್ರಂಥಗಳನ್ನು ಪ್ರಸಿದ್ಧಿಸಬೇಕೆಂದಿತ್ತು ಅದು ಸಾಧ್ಯವಾಗಲಿಲ್ಲ ವಿದ್ಯಾರಣ್ಯ ಪುಣ್ಯತಿಥಿಯ ದಿವಸವಾದರೂ ವಿಜಯನಗರ ಸಾಮ್ರಾಜ್ಯದ ಇತಿಹಾಸವನ್ನು ಪ್ರಸಿದ್ಧಿಸಬೇಕೆಂಬ ಇಚ್ಛೆಯಾಯಿತು. ಹೀಗಾಗಿ ಹೊಸ ವರುಷದ ಪುಸ್ತಕವನ್ನಿಂದು ಕೊಡುವದಾಗಲಿಲ್ಲ.

ಹೊಸ ವರುಷದಿಂದ ನಾವು ಹೊಸ ಏರ್ಪಾಡು ಮಾಡಿರುವೆವು. ಈ ವರುಷದಲ್ಲಿ ಇಂತಿಷ್ಟೇ ಬೆಲೆಯ ಇಂತಿಷ್ಟೇ ಪುಸ್ತಕಗಳನ್ನು ತೆಗೆಯು ಬೇಕೆಂದು ಕಟ್ಟು ಇಟ್ಟುಕೊಂಡಿಲ್ಲ. ೧ ರೂಪಾಯಿ ಕೊಟ್ಟು ಮಾಲೆಯ ಚಂದಾದಾರರಾದವರಿಗೆ ಮಾಲೆಯಲ್ಲಿ ಹೊರಡುವ ಗ್ರಂಥಗಳೆಲ್ಲವನ್ನು ಮುಕ್ಕಾಲು ಬೆಲೆಗೆ ಕಳುಹುತ್ತ ಹೋಗುವೆವು. ನಮ್ಮ ಹೋದ ವರುಷದ ಚಂದಾದಾರರು ಮುಂದಿನ ವರುಷದಲ್ಲಿಯೂ ಚಂದಾದಾರರಾಗುಳಿದು ಹೊಸ ಚಂದಾದಾರರನ್ನು ಕೂಡಿಸಿಕೊಟ್ಟು ನೆರವಾಗುವರೆಂದು ನಂಬಿಯೇ ಈ ಮುಂದೆಯೂ ಮಾಲೆಯನ್ನು ನಡಿಸುವ ಸಾಹಸ ಮಾಡಿರುವೆವು.

ಈ ೩--೪ ನೆಯ ಗ್ರಂಥಗಳನ್ನು ಹೊರಡಿಸುವಲ್ಲಿ ನೆರವಾದ ನನ್ನ ಗೆಳೆಯರ ಹಾಗೂ ಇನ್ನಿತರ ಮಹನೀಯರ ಉಪಕಾರವನ್ನು ನಾನು

ಮುರಿಯುವಂತಿಲ್ಲ. ನನ್ನ ಕೇಳಿಕೆಗೆ ಒಪ್ಪಿ ಗೆ. ಜೋಶಿ, ಗೆ. ಕುಲಕರಣಿ ಪ್ರಹ್ಲಾದ ಇವರು ಗ್ರಂಥಗಳನ್ನು ಬರೆದುಕೊಟ್ಟರು. ಶ್ರೀ. ಆಲೂರ ವೆಂಕಟರಾಯರು ಮುನ್ನುಡಿಯಿಂದ ಇವನ್ನು ಸಿಂಗರಿಸಿದರು. ಜಯ ಕರ್ನಾಟಕ ಮಂಡಲದವರು "ಕುಯೋಗ ನಿವಾರಣೆ" ಯ ಪಡಿಯಚ್ಚನ್ನು ಕೊಟ್ಟರು. ಗೆ. ಜಿ. ಎಸ್. ಹುದ್ದಾರ ಇವರು ನಕಾಶವನ್ನು ತೆಗೆದು ಕೊಟ್ಟರು. ವಿ. ಪಿ ಆರ್. ಪವಾರ ಕರ್ನಾಟಕ ಫೋಟೋ ಝಿಂಕೋ ವರ್ಕ್ಸ್ ಇವರು ವೇಳೆಗೆ ಸರಿಯಾಗಿ ಪಡಿಯಚ್ಚುಗಳನ್ನು ಮಾಡಿಕೊಟ್ಟರು. ಶ್ರೀ. ಪಂಡಿತ ವೆಂಕಟರಾಯರು ವೇಳೆಗೆ ಸರಿಯಾಗಿ ಮುದ್ರಿಸಿಕೊಟ್ಟರು. ಇವರೆಲ್ಲರ ಸಹಾಯವಿಲ್ಲದಿದ್ದರೆ ಸಂಕಲ್ಪಿಸಿದ ವೇಳೆಯಲ್ಲಿ ಈ ರೀತಿಯಲ್ಲಿ ಗ್ರಂಥಗಳನ್ನು ಹೊರಡಿಸಲಿಕ್ಕಾಗುತಿದ್ದಿಲ್ಲ. ಇವರ ಅಭಿನಂದನೆಯನ್ನು ಎಷ್ಟು ಮಾಡಿದರೂ ಕಡಿಮೆಯೆ.

ಭುವನೇಶ್ವರೀ ಗ್ರಂಥಮಾಲೆ,
ಬೆಳಗಾವಿ
ಚಾಲುಕ್ಯ ವಿಕ್ರಮ ವರ್ಷ ೮೫೭.
ಜ್ಯೇಷ್ಠವದ್ಯ ತ್ರಯೋದಶಿ.
೧-೭-೧೯೩೨

ಬಿ. ಕಲ್ಯಾಣಶರ್ಮಾ.

# ಸಹಾಯ ತೆಗೆದುಕೊಂಡ ಗ್ರಂಥಗಳು


1 A Forgotten Empire. (Mr. R. Sewell)

2 The never to be Forgotten Empire.
(Mr B Suryanarayanrao)

3 Sources of Vijayanager.

4 The Aravidu Dynasty of Vijayanagar.
(Rev. H. Heras.)

5 Imperial Gazetteer

6 City of Vijayanagar

7 Hampi Ruins (Mr. A. H. Longhurst)

8 United Karnatak (Mr R. R. Divakar)

೧ ವಿಜಯನಗರ — ವಾಗ್ಭೂಷಣ

೨ ಕರ್ನಾಟಕ ಕೈಪಿಡಿ — ಕರ್ಣಾಟಕ ಪ್ರಾಂತಿಕ ಕಾಂಗ್ರೆಸ ಕಮಿಟಿ

೩ ಕರ್ನಾಟಕದ ವರ್ಣನೆಯೂ ಇತಿಹಾಸವೂ — ಶ್ರೀ. ರಾಜಪುರೋಹಿತ

೪ ವಿದ್ಯಾರಣ್ಯರ ಕಾಲವಿಚಾರ — ಶ್ರೀ. ಡಿ. ವಿ. ಗುಂಡಪ್ಪ

೫ ವಿದ್ಯಾರಣ್ಯರ ಸಮಕಾಲೀನರು — ಶ್ರೀ. ಡಿ. ವಿ. ಗುಂಡಪ್ಪ

೬ ವಿದ್ಯಾರಣ್ಯರ ಚರಿತ್ರ — ಶ್ರೀ. ಹುಲಿಕವಿ

೭ ರಾಮರಾಯನ ಬಖೈರು

೮ ಪಂಪಾಯಾತ್ರೆ — ಶ್ರೀ. ವಿ. ಸಿ.

ಇವಲ್ಲದೆ ಸಾಹಿತ್ಯಪರಿಷತ್ಪತ್ರಿಕೆ, ಜಯಕರ್ನಾಟಕ, ಪ್ರಬುದ್ಧ ಕರ್ನಾಟಕ, ವಾಗ್ಭೂಷಣ ಮೊದಲಾದ ಮಾಸಪುಸ್ತಕಗಳಲ್ಲಿ ಬಂದ ಲೇಖಗಳು.

# ಪರಿವಿಡಿ.

ಆ ಸೌಂದರ್ಯದ ರಾಜಧಾನಿಯುಕಟೂ ಆ ರಾಜನಾವೈಭವಂ
ಆ ಸಾಮಂತ ಸಮೂಹವಾ ಬುಧಸಭಾಸ್ಥಾನಂಗಳಾಗ್ರಂಥಗಳ್
ಆ ಸೋಮಾನನೆಯರ್ ಪ್ರಮತ್ತ ನೃಪಪುತ್ರರ್ ಘೋಷಿಪಾ
ವಂದಿಗಳ್
ಆ ಸರ್ವರ್ ಮರೆಯಾದರಾರ ವಶದಿಂದಾ ಕಾಲಗೀವಂದನಂ

—ಶಾಂತಕವಿಗಳು.

# ವಿಜಯನಗರ ಸಾಮ್ರಾಜ್ಯ.

## ೧ ಕನ್ನಡಿಗರು ಮಾಡಿದ ಕೆಲಸ.

ಭರತಖಂಡದಲ್ಲಿ ಇಂದು ಕರ್ಣಾಟಕಕ್ಕೊಂದು ಸ್ಥಾನವಿಲ್ಲದೆ ಇರಬಹುದು; ಕನ್ನಡಿಗರಿಂದು ನಿರ್ವೀರ್ಯರಾಗಿರಬಹುದು; ಇನ್ನುಳಿದ ಜನಾಂಗಗಳ ಮುಂದೆ ಕನ್ನಡಿಗರಿಗೆ ಮೋರೆ ಕೆಳಗೆ ಹಾಕುವ ಪ್ರಸಂಗ ಬಂದಿರಬಹುದು. ಹಾಗಾಗಲು ಪರಿಸ್ಥಿತಿಯೂ ಕಾರಣವಾಗಿದೆ. ಆದರೊಂದು, ಕನ್ನಡಿಗರಷ್ಟು ಉಜ್ವಲವಾದ ಪೂರ್ವ ಚಾರಿತ್ರ್ಯವು ಭರತಖಂಡದ ಮತ್ತಾವ ಜನಾಂಗಕ್ಕೂ ಇರುವುದಿಲ್ಲವೆಂಬುದನ್ನು ಮರೆಯಲಾಗದು.

ಕನ್ನಡಿಗರ ಆ ಉಜ್ವಲವಾದ ಪೂರ್ವ ಚರಿತೆಯೂ ಇಂದು ಬೂದಿ ಮುಚ್ಚಿದ ಕೆಂಡದಂತಿದೆ. ಅದೊಂದು ಕಾಲದಲ್ಲಿ ಭರತಖಂಡದ, ಅದೇಕೆ ಇಡೀ ಜಗತ್ತಿನ ಕಣ್ಣು ಕುಕ್ಕಿಸಿರುವೆವೆಂಬರಿವು ಕನ್ನಡಿಗರಿಗೆಯೇ ಇಲ್ಲವಾಗಿದೆ. ಭರತಖಂಡದ ಇನ್ನಿತರ ಜನಾಂಗಗಳು ತಮ್ಮ ಪೂರ್ವ ಚಾರಿತ್ರ್ಯದಿಂದ ಒಂದರಷ್ಟು ಹೆಮ್ಮೆ ತಾಳಿದರೆ ಅದರ ಹತ್ತರಷ್ಟು ಹೆಮ್ಮೆ ಪಡಬಹುದು ಕನ್ನಡಿಗರು. ಆದರೇನು, ಕುರಿ ಹಿಂಡಿನಲ್ಲಿ ಬೆಳೆದ ಸಿಂಹನಂತಾಗಿದೆಯೀಗ ನಮ್ಮ ಬಾಳುವೆ !

"ಕನ್ನಡಿಗರಲ್ಲೇನಿದೆ ? ಒಂದು ವಾಙ್ಮಯವೆ ? ಕಲೆಯೆ ? ಪೂರ್ವ ಚರಿತೆಯೆ ? ನಿರುತ್ಸಾಹಿಗಳು, ನಿರ್ವೀರ್ಯರು, ಕಾರ್ಯಾರಂಭಗುಣ ಶೂನ್ಯರು .... " ಮೊದಲಾಗಿ ಯಾರಾದರೂ ಎಂದರೆ ಅವರ ಕೂಡ ಹಾಗೆಯೇ ಹೂಂಗುಟ್ಟಿ ಬಿಡುವ ಕನ್ನಡಿಗರದೆಷ್ಟೋ ಜನ. ಭರತಖಂಡದ

ಇಂದಿನ ಯಾವ ಭಾಷೆಯು ಪ್ರಾಚೀನ ವಾಙ್ಮಯಕ್ಕೂ ಹಿಂದೆ ಬೀಳದ, ಹಾಗೆ ನೋಡಿದರೆ ಬಹುತರ ಅವುಗಳಿಗಿಂತ ಒಂದು ಪಾಲು ಹೆಚ್ಚು ಪ್ರಾಚೀನ ವಾಙ್ಮಯವು ನಮ್ಮಲ್ಲಿದೆ. ಭರತಖಂಡದ ಉಳಿದೆಡೆಯಲ್ಲೆಲ್ಲಿಯೂ ನೋಡಲಿಕ್ಕೆ ದೊರೆಯದ ಕಲಾವೈಭವವು ಕನ್ನಡ ನಾಡಿನಲ್ಲಿದೆ. ಜಗದ್ವಿಖ್ಯಾತವಾದ ಅಜಂಟದ ಗುಹೆಗಳಲ್ಲಿಯ ಚಿತ್ರಗಳನ್ನು ಚಿತ್ರಿಸಿದವರು ಕನ್ನಡಿಗರು, ತಮ್ಮ ಕಲಾಚಾತುರ್ಯದಿಂದ ನೋಡ ಬಂದವರನೆಲ್ಲ ಬೆರಗುಗೊಳಿಸುವ ಹಳೆಬೀಡು ಬೇಲೂರ ದೇವಾಲಯಗಳನ್ನು ಕಟ್ಟಿದವರು ಕನ್ನಡಿಗರು; ಭರತಖಂಡವನ್ನೆಲ್ಲ ಏಕಛತ್ರದಿಂದ ಆಳಿದ ಆ ಪುಲಿಕೇಶಿ ಚಕ್ರವರ್ತಿಯು ಕನ್ನಡಿಗನು, ಆ ಚಕ್ರವರ್ತಿಯ ರಾಜಧಾನಿಯಾಗಿ ಮೆರೆದಾ ಬಾದಾಮಿಯು ಕನ್ನಡ ನಾಡಿನಲ್ಲಿನದು; ಅಷ್ಟೇಕೆ ಭರತಖಂಡದಲ್ಲಿಂದು ಆರ್ಯಧರ್ಮವನ್ನು, ಆರ್ಯಸಂಸ್ಕೃತಿಯನ್ನು ಅಚ್ಚಳಿಯದೆ ಉಳಿಯಗೊಟ್ಟ ಶ್ರೇಯವು ಕನ್ನಡಿಗರದು! ಆರ್ಯಧರ್ಮದ ಮೇಲೆ, ಆರ್ಯ ಸಂಸ್ಕೃತಿಯ ಮೇಲೆ ಆದ ಎರಡು ದೊಡ್ಡ ಆಘಾತಗಳನ್ನು ತಡೆದು, ಕಿಲುಬು ಹಿಡಿದ ಹಿಂದೂಧರ್ಮವನ್ನು ಬೆಳಗಿ ಒಪ್ಪಹಾಕಿ ತೊಳಗು ಬೆಳಗುವಂತೆ ಮಾಡಿದವರು ನಮ್ಮ ಕನ್ನಡಿಗರು!

ಆ ಎರಡು ದೊಡ್ಡ ಆಘಾತಗಳೆಂದರೆ ಆರ್ಯ ಧರ್ಮದ ಮೇಲಾದ ಬೌದ್ಧ ಧರ್ಮದ ಆಕ್ರಮಣ; ಹಿಂದೂ ರಾಜ್ಯಗಳ ಮೇಲೆ, ಆರ್ಯ ಸಂಸ್ಕೃತಿಯ ಮೇಲೆ ಆದ ಮುಸಲ್ಮಾನರ ಆಕ್ರಮಣ.

ಕ್ರಿಸ್ತ ಪೂರ್ವ ನಾಲ್ಕನೆಯ ಶತಮಾನದ ವರೆಗೆ ಭರತಖಂಡದ ಆರ್ಯ ಧರ್ಮವು ತೊಳಗಿ ಬೆಳಗಿತು, ಭರತಖಂಡದ ಹೊರಗೂ ತನ್ನ ಸಂಸ್ಕೃತಿಯನ್ನು ಹರಡಿತು. ಆದರೆ ಕ್ರಿ. ಪೂ. ೪ ನೆಯ ಶತಮಾನದಲ್ಲುದಯವಾದ ಬೌದ್ಧಧರ್ಮವು ಅದನ್ನು ಹಿಂಗೂಡಿತು. ಮೊದಲೇ ಹುಳುಕಿಂದು ಹುರುಳೆಲ್ಲವೂ ಹೋಗಿ ಸಿಪ್ಪೆ ಮಾತ್ರ ಉಳಿದಿದ್ದ ಹಿಂದೂ

ಧರ್ಮವು ಬೌದ್ಧ ಧರ್ಮಾನುಯಾಯಿಯಾದ ಅಶೋಕ ಮಹಾರಾಜ ನಂತಹ ಚಕ್ರವರ್ತಿಯು ಕೈಕೊಂಡ ಧರ್ಮಪ್ರಚಾರಕಾರ್ಯದಿಂದ ಮೂಲೆಗುಂಪಾಯಿತು. ಹಾ ಹಾ ಎನ್ನುವುದರೊಳಗೆ ಆಸೇತುಹಿಮಾಚಲ, ಅಷ್ಟೇಕೆ ಭರತಖಂಡದ ಹೊರಗಿನ ಸಿಂಹಲದ್ವೀಪದಲ್ಲಿಯೂ ಚೀನ ದೇಶದಲ್ಲಿಯೂ ಬೌದ್ಧ ಧರ್ಮದ ಜಯಭೇರಿಯು ಹೊಡೆಯಿತು. ಅದಾಗ ಕೇರಳ ಪ್ರಾಂತದ ಕಾಲಟಿ ಎಂಬಲ್ಲಿ ಜನ್ಮ ತಾಳಿದರು ಆ ಮಹಾನುಭಾವ ಶಂಕರಾಚಾರ್ಯರು. ಆರ್ಯಧರ್ಮದ ಹೀನಸ್ಥಿತಿಯನ್ನು ಕಂಡು ಅದರ ಉದ್ಧಾರಕ್ಕಾಗಿ ನಡು ಕಟ್ಟಿದರು. ಚೆನ್ನಾಗಿ ಬೆಳೆ ತೆಗೆದುಕೊಳ್ಳಬೇಕಾದರೆ ಒಳ್ಳೆಯ ಕ್ಷೇತ್ರವನ್ನರಿಸಿ ಉತ್ತುಬಿತ್ತಬೇಕಲ್ಲವೆ ? ಕೇರಳ ದೇಶವು ಅವರ ಕಾರ್ಯಕ್ಕೆ ಸರಿಯಾದ ಕ್ಷೇತ್ರವೆಂದೆನಿಸಲಿಲ್ಲ. ಬೇರೊಂದು ಒಳ್ಳೆಯ ಕ್ಷೇತ್ರವನ್ನರಸತೊಡಗಿದರು. ಕರ್ಣಾಟಕವು ಅವರ ಕಾರ್ಯಕ್ಕೆ ಸರಿಯಾದ ಕ್ಷೇತ್ರವೆಂದೆನಿಸಿತು. ಇಲ್ಲಿಯೇ ನೆಲೆಸಿ ಶೃಂಗೇರಿಯಲ್ಲಿ ಒಂದು ಮಠವನ್ನು ಸ್ಥಾಪಿಸಿ ಆರ್ಯ ಧರ್ಮದ ತತ್ವಗಳನ್ನು ಸಾರಿದರು. ಅದಾಗ ಆರ್ಯ ಧರ್ಮವು ಮತ್ತೆ ತಲೆಯೆತ್ತಿತು.

ವೇದೋಪನಿಷತ್ತುಗಳಲ್ಲಿ ಹೇಳಿದ ಅದ್ವೈತ ವಿಶಿಷ್ಟಾದ್ವೈತ ದ್ವೈತ ಮತಗಳನ್ನೇ ಹೊಸ ಬಗೆಯಲ್ಲಿ ಜನರ ಮುಂದಿಟ್ಟರು ಶಂಕರಾಚಾರ್ಯ ರಾಮಾನುಜಾಚಾರ್ಯ ಮಧ್ವಾಚಾರ್ಯರು. ಈ ಮೂವರಲ್ಲಿ ಶಂಕರಾಚಾರ್ಯರ ಕಾರ್ಯಕ್ಷೇತ್ರವು ಕರ್ಣಾಟಕವೆಂಬುದನ್ನು ಈ ಮೊದಲು ಹೇಳಿಯೇ ಇದೆ. ವಿಶಿಷ್ಟಾದ್ವೈತ ಮತೋದ್ಧಾರಕರಾದ ರಾಮನುಜಾಚಾರ್ಯರ ಜನ್ಮಭೂಮಿಯು ಕರ್ಣಾಟಕವಾಗದಿದ್ದರೂ ಅವರ ಕಾರ್ಯಕ್ಷೇತ್ರವೂ ಕರ್ಣಾಟಕವೆ; ಅವರಿಗಾಶ್ರಯವನ್ನು ಕೊಟ್ಟು ಅವರಾ ವಿಶಿಷ್ಟಾದ್ವೈತಮತವನ್ನು ಸ್ವೀಕರಿಸಿದವನು ಕರ್ಣಾಟಕದ ಸಮ್ರಾಜನಾದ ಹೊಯ್ಸಳ ಬಿಟ್ಟೀದೇವನು. ದ್ವೈತಮತೋದ್ಧಾರಕರಾದ

ಮಧ್ವಾಚಾರ್ಯರಂತೂ ಹುಟ್ಟುಗನ್ನಡಿಗರು. ಎಂದರೆ ಹಿಂದೂ ಧರ್ಮದ ಪುನರುದ್ಧಾರ ಮಾಡಿದುದರಲ್ಲಿ ಕರ್ಣಾಟಕಕ್ಕೆ ಅಗ್ರಸ್ಥಾನವಿದೆ.

ಕ್ರಿ. ಶ. ೭ ನೆಯ ಶತಮಾನದಲ್ಲಿ ಅರಬಸ್ಥಾನದಲ್ಲಿ ಮುಸಲ್ಮಾನೀ ಧರ್ಮವನ್ನು ಸ್ಥಾಪಿಸಿದರು ಮಹಮ್ಮದ ಪೈಗಂಬರರು. ಅವರ ಅನುಯಾಯಿಗಳು ಕಯ್ಯಲ್ಲಿ ಶಸ್ತ್ರಗಳನ್ನು ಧರಿಸಿ ಧರ್ಮಪ್ರಸಾರ ಮಾಡುತ್ತ ನೂರಿನ್ನೂರು ವರ್ಷಗಳಲ್ಲಿ ಅರಬಸ್ಥಾನ, ಇರಾಣ, ತುರ್ಕಸ್ಥಾನ, ಅಫಗಾನಿಸ್ಥಾನಗಳನ್ನು ಪಾದಾಕ್ರಾಂತ ಮಾಡಿದರು. ಆ ಪ್ರದೇಶದ ಜನರನ್ನೆಲ್ಲ ಮುಸಲ್ಮಾನೀ ಧರ್ಮದ ಅನುಯಾಯಿಗಳನ್ನಾಗಿ ಮಾಡಿಕೊಂಡರು. ೧೦ನೆಯ ಶತಮಾನದಲ್ಲಿ ಹಿಂದೂ ದೇಶದ ಮೇಲೆಯೂ ಈ ಮುಸಲ್ಮಾನೀ ಧರ್ಮಾನುಯಾಯಿಗಳ ಅಭಿಯೋಗವಾಯಿತು. ಅವರನ್ನೆದುರಿಸಿದ ಅನಂಗಪಾಲ ಜಯಪಾಲರು ರಣರಂಗದಲ್ಲಿ ಮಡಿದರು. ಹಿಂದೂ ದೇಶದ ಮೇಲೆ ಇವರ ಅಭಿಯೋಗವಾದದ್ದು ಧರ್ಮಪ್ರಸಾರಕ್ಕಾಗಿ ಅಲ್ಲ. ಹಿಂದೂ ದೇಶವನ್ನು ಕೊಳ್ಳೆಹೊಡೆವುದಕ್ಕಾಗಿ. ಗಝ್ನಿ ಮಹಮೂದನು ೧೭ ಸಾರೆ ಧಾಳಿಯಿಟ್ಟು ಗುಜರಾಥದ ವರೆಗಿನ ಪ್ರದೇಶವನ್ನು ಕೊಳ್ಳೆಹೊಡೆದು ಅಪಾರ ಸಂಪತ್ತನ್ನೊಯ್ದನು. ಕೆಲ ದಿವಸಗಳಲ್ಲಿ ಅಫಗಾನಿಸ್ಥಾನದಲ್ಲಿ ಪ್ರಬಲನಾದ ಮಹಮೂದ ಘೋರಿಯ ದೃಷ್ಟಿಯು ಹಿಂದೂ ರಾಜ್ಯಗಳ ಮೇಲೆ ಬಿದ್ದಿತು. ತಮ್ಮತಮ್ಮಲ್ಲಿಯ ಒಳಜಗಳಗಳ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ ಜಯಚಂದನು ಘೋರಿಗೆ ಆಮಂತ್ರಣವಿತ್ತು ಕರೆಸಿಕೊಂಡನು. "ರೋಗಿ ಬಯಸಿದುದೂ ಹಾಲೋಗರ ವೈದ್ಯ ಹೇಳಿದುದೂ ಹಾಲೋಗರ!" ಎಂಬಂತಾಯಿತು. ಆದಾಗ ಉತ್ತರ ಹಿಂದುಸ್ಥಾನದಲ್ಲಿ ಪ್ರಬಲನಾದ ಪೃಥ್ವೀರಾಜನು ಮೊದಲೇನೋ ಘೋರಿಗೆ ಒಂದು ಕೈತೋರಿಸಿದನು. ಆದರೆ ಎರಡನೆಯ ಸಾರೆ ಎದುರಿಸಿದಾಗ ಘೋರಿಯ ಮುಂದೆ ಒಳಜಗಳಗಳಿಂದ ಜರ್ಜರಿತನಾದ ಪೃಥ್ವೀರಾಜನ ಆಟವು ಸಾಗಲಿಲ್ಲ.

ಅನಂಗಪಾಲ ಜಯಪಾಲರ ಸ್ಥಿತಿಯೇ ಪೃಥ್ವೀರಾಜನದಾಯಿತು. ಮುಸಲ್ಮಾನೀ ಧರ್ಮವು ಹಿಂದೂ ದೇಶದಲ್ಲಿ ಕಾಲೂರಿ ನಿಲ್ಲಲು ಸ್ಥಳವಾಯಿತು. ಕೆಲ ದಿವಸಗಳಲ್ಲಿ ಹಿಂದೂದೇಶದ ಮುಖ್ಯ ನಗರನಾದ ದಿಲ್ಲಿಯು ಮುಸಲ್ಮಾನರ ಕೈವಶವಾಯಿತು. ವಿಂಧ್ಯಪರ್ವತದ ವರೆಗಿನ ಉತ್ತರ ಹಿಂದುಸ್ಥಾನವೇ ಮುಸಲ್ಮಾನರಿಂದ ಪಾದಾಕ್ರಾಂತ ಮಾಡಲ್ಪಟ್ಟಿತು.

ಇಲ್ಲಿಯ ವರೆಗೆ ದೊರೆತ ಜಯದಿಂದ ಉಬ್ಬಿದ ಮುಸಲ್ಮಾನ ಬಾದಶಹರ ಕಣ್ಣು ದಕ್ಷಿಣದ ಮೇಲೆಯೂ ಬಿದ್ದಿತು. ಆಸೇತುಹಿಮಾಚಲ ಭರತಖಂಡವನ್ನೇ ಪಾದಾಕ್ರಾಂತ ಮಾಡಬೇಕೆಂಬ ಅಭಿಲಾಷೆಯು ಅವರಲ್ಲಿ ಒಡಮೂಡಿತು. ಅವರ ಆ ಅಭಿಲಾಷೆಯು ಪೂರ್ಣವಾಗಿದ್ದರೆ ಹಿಂದೂ ಜನಾಂಗಕ್ಕೆ, ಆರ್ಯ ಸಂಸ್ಕೃತಿಗೆ ಅದಾವ ಸ್ವರೂಪವು ಬರುತ್ತಿದ್ದಿತೋ ಏನೊ! ದಕ್ಷಿಣ ದೇಶದವರು ಅದಕ್ಕೆ ತಡೆಹಾಕುವ ಪ್ರಯತ್ನಗಳನ್ನು ಮಾಡಿದರು; ಅದರಲ್ಲಿ ಯಶಸ್ವಿಗಳಾದರು ಆ ದೃಷ್ಟಿಯಿಂದಲೇ ದಕ್ಷಿಣದಲ್ಲಿ ಎರಡು ಹೊಸ ರಾಜ್ಯಗಳು ಸ್ಥಾಪಿಸಲ್ಪಟ್ಟುವು. ಅವುಗಳಲ್ಲಿ ಮೊದಲಿನದು ವಿಜಯನಗರದ ಸಾಮ್ರಾಜ್ಯ, ಎರಡನೆಯದು ಮಹಾರಾಷ್ಟ್ರ ರಾಜ್ಯ. ಮೊದಲಿನದಾದ ವಿಜಯನಗರ ಸಾಮ್ರಾಜ್ಯವು ೨೦೦ ವರ್ಷಗಳ ವರೆಗೆ ತನ್ನ ವೈಭವದಿಂದ ಪರದೇಶದವರ ಕಣ್ಣು ಸಹ ಕುಕ್ಕಿಸಿ, ಆರ್ಯ ಸಂಸ್ಕೃತಿಯ ರಕ್ಷಣೆ ಮಾಡಿತು. ಆರ್ಯಧರ್ಮದ, ಆರ್ಯ ಸಂಸ್ಕೃತಿಯ ರಕ್ಷಣೆಗಾಗಿಯೆ ಆ ಸಾಮ್ರಾಜ್ಯದ ಸ್ಥಾಪನೆಯಾಗಿದ್ದಿತೆಂಬುದು ಈ ಕೆಳಗಿನ ಶಾಸನದಿಂದ ಸ್ಪಷ್ಟವಾಗುತ್ತಿದೆ.

ನಿರ್ಮಾಯ ವಿದ್ಯಾನಗರಂ ನೃಪಂ ಹರಿಹರಾಭಿದಂ
ಗೋದೇವದ್ವಿಜರಕ್ಷಾರ್ಥ ಮಭ್ಯಷಿಂಚನ್ ನೃಪಾಸನೇ ||

ಶೃಂಗೇರಿಯ ಜಹಗೀರ ೧೧ ನೆಯ ಶಾಸನ.

ಎಂದರೆ ಮುಸಲ್ಮಾನರ ದಾಳಿಯಿಂದ ಆರ್ಯಯುವುದೊ ಉಳಿಯು

ವುದೊ ಎಂಬ ಶಂಕೆಯಲ್ಲಿದ್ದ ಆರ್ಯ ಸಂಸ್ಕೃತಿಯನ್ನು ರಕ್ಷಿಸಿದವರು "ಕರ್ಣಾಟಕ ಸಾಮ್ರಾಜ್ಯ" ವೆಂದು ಹೆಸರು ಪಡೆದ ವಿಜಯನಗರದ ಸಮ್ರಾಜರು! ಆ ಕನ್ನಡ ರಣಧೀರರು! ಹುಕ್ಕ ಬುಕ್ಕ ಕಲಿಗಳು! ಅವರಿಗೆ ಪ್ರೇರಕನಾಗಿ ನಿಂತು ಸಾಮ್ರಾಜ್ಯವನ್ನು ಸ್ಥಾಪಿಸಿ "ಕರ್ಣಾಟಕ ಸಿಂಹಾಸನ ಸ್ಥಾಪನಾಚಾರ್ಯ" ನೆಂದು ಬಿರುದಾಂತವನು ಆ ವಿದ್ಯಾರಣ್ಯ ಮಹಾಮುನಿಯು !!

## ೨ ದಕ್ಷಿಣದ ಮೇಲೆ ಮುಸಲ್ಮಾನರ ದಾಳಿ.

೧೩ ನೆಯ ಶತಮಾನದ ಕೊನೆಯ ಭಾಗದಲ್ಲಿ ದಿಲ್ಲಿಯಲ್ಲಿ ಖಿಲ್ಜಿ ಮನೆತನದ ಜಲಾಲುದ್ದೀನನೆಂಬವನು ಆಳುತಿದ್ದನು. ಅಲ್ಲಾವುದ್ದೀನನ ದೊಡ್ಡಪ್ಪನೀತ. ನರ್ಮದೆಯ ವರೆಗಿನ ಪ್ರದೇಶವು ಈತನಾಳಿಕೆಗೆ ಒಳ ಗಾಗಿದ್ದಿತು. ಈ ಜಲಾಲುದ್ದೀನನಿರುವಾಗಲೇ ಅಲ್ಲಾವುದ್ದೀನನು ದಕ್ಷಿಣ ದಂಡಯಾತ್ರೆಗಾಗಿ ಹೊರಟು ನರ್ಮದೆಯನ್ನು ದಾಟಿ ದೇವಗಿರಿಯ ಮೇಲೆ ಸಾಗಿ ಬಂದನು. ದಕ್ಷಿಣದಲ್ಲಿ ಇದೇ ಮುಸಲ್ಮಾನರ ಪ್ರಥಮ ಪ್ರವೇಶ.

ದಕ್ಷಿಣ ಹಿಂದೂ ದೇಶದಲ್ಲಿ ಆಗ ಹಲವು ರಾಜಮನೆತನಗಳು ಚಿಕ್ಕ ಚಿಕ್ಕ ಪ್ರದೇಶಗಳ ಮೇಲೆ ತಮ್ಮ ಒಡೆತನವನ್ನು ಸಾಗಿಸಿಕೊಂಡಿದ್ದುವು. ಒಂದು ಮನೆತನದವರು ಇನ್ನೊಂದು ಮನೆತನದವರ ಮೇಲೆ ಸಾಗಿಹೋಗಿ ಅದನ್ನು ತಮ್ಮಾಧೀನದಲ್ಲಿಟ್ಟುಕೊಂಡು ಕಪ್ಪು ಕಾಣಿಕೆಗಳನ್ನು ತೆಗೆದು ಕೊಳ್ಳಲಿಕ್ಕೆ ಹವಣಿಸುತಿದ್ದರು. ಯಾವುದೊಂದು ರಾಜಮನೆತನದಲ್ಲಿ ಒಬ್ಬ ಪ್ರಬಲನುದಿಸಿದನೊ, ಅವನು ಇಂತಹ ಚಿಕ್ಕಪುಟ್ಟ ರಾಜ್ಯಗಳನೆಲ್ಲ ತನ್ನಂಕಿತದಲ್ಲಿಟ್ಟುಕೊಂಡು ಆ ರಾಜಮನೆತನಗಳಿಂದ ಕಪ್ಪುಕಾಣಿಕೆ ಗಳನ್ನು ತೆಗೆದುಕೊಂಡು ಸಮ್ರಾಜನಾಗುತಿದ್ದನು. ಅವನ ಅಂಕಿತಕ್ಕೊಳ ಪಟ್ಟ ಪ್ರದೇಶವು ಸಾಮ್ರಾಜ್ಯವಾಗುತಿತ್ತು. ಅವನಿಗೆ ಕಪ್ಪುಕಾಣಿಕೆ ಗಳನ್ನು ಕೊಡುತ್ತಿದ್ದಾ ಚಿಕ್ಕ ಪುಟ್ಟ ರಾಜರು, ಸಾಮಂತರು ಮಂಡಲೇ ಶ್ವರರು, ಮಹಾಮಂಡಲೇಶ್ವರರು ಎನಿಸಿಕೊಳ್ಳುತಿದ್ದರು. ಅಲ್ಲಾವುದ್ದೀನನು ದಂಡೆತ್ತಿ ಬಂದಾಗ ದಕ್ಷಿಣದಲ್ಲಿ ಮೂರು ಸಾಮ್ರಾಜ್ಯಗಳಿದ್ದುವು; ಓರಂಗ ಲ್ಲಿನ ಕಾಕತೀಯರ ರಾಜ್ಯ, ದೇವಗಿರಿಯ ಯಾದವರಾಜ್ಯ, ದ್ವಾರ ಸಮುದ್ರದ ಹೊಯ್ಸಳ ಬಲ್ಲಾಳರ ರಾಜ್ಯ, ಇವೇ ಆ ಮೂರು ಸಾಮ್ರಾಜ್ಯ

ಗಳು. ಈ ಮೂರು ರಾಜ್ಯಗಳ ನಡುವೆ ಮೇಲಿಂದ ಮೇಲೆ ಯುದ್ಧಗಳು ನಡೆಯುತಿದ್ದುವು. ಅಲ್ಲಾವುದ್ದೀನನು ದಂಡೆತ್ತಿ ಬಂದುದು ಇವುಗಳಲ್ಲೊಂದಾದ ದೇವಗಿರಿಯ ಮೇಲೆ.

ದೇವಗಿರಿಯಲ್ಲಿ ಆಗ ರಾಮದೇವನೆಂಬರಸು ರಾಜ್ಯಭಾರ ಮಾಡುತಿದ್ದನು. ಆಕಸ್ಮಾತ್ತಾಗಿ ಬಂದ ದಾಳಿಯನ್ನು ತಡೆಯುವುದಕ್ಕಾಗಿ ಅವನು ಒಳ್ಳೇ ಪ್ರಯತ್ನ ಮಾಡಿದನು. ಆದರೇನು, ಅಲ್ಲಾವುದ್ದೀನನ ಸೈನ್ಯದ ಮುಂದೆ ಅವನ ಆಟವು ಸಾಗಲಿಲ್ಲ. ಜಯಶೀಲನಾದ ಅಲ್ಲಾವುದ್ದೀನನು ದೇವಗಿರಿಯ ರಾಜ್ಯವನ್ನು ಕೊಳ್ಳೆಹೊಡೆದು ಅಪಾರ ಸಂಪತ್ತನ್ನು ದಿಲ್ಲಿಗೆ ಒಯ್ದನು.

ತನ್ನ ದೊಡ್ಡಪ್ಪನಾದ ಜಲಾಲುದ್ದೀನನನ್ನು ಕೊಂದು ಯಾವಾಗ ದಿಲ್ಲಿಯ ರಾಜ್ಯವನ್ನು ಎತ್ತಿ ಹಾಕುವೆನೋ ಎನಿಸಿತ್ತು ಅಲ್ಲಾವುದ್ದೀನನಿಗೆ. ಆ ಸಮಯವನ್ನು ಕಾಯುತಿದ್ದು ಕೊನೆಗೊಮ್ಮೆ ಜಲಾಲುದ್ದೀನನನ್ನು ಕೊಂದು ಅವನಿಗೆ ಹತ್ತಿದವರು ಹೊಂದಿದವರು ಎಲ್ಲರನ್ನೂ ಮಣ್ಣುಗೂಡಿಸಿ ದಿಲ್ಲಿಯ ಸಿಂಹಾಸನವನ್ನು ಹಿಡಿದುಕೊಂಡನು.

ದೇವಗಿರಿಯ ಮೇಲೆ ಸಾಗಿ ಬಂದಾಗಲೇ ದಕ್ಷಿಣದ ಸಂಪತ್ತನ್ನು ನೋಡಿ ಅಲ್ಲಾವುದ್ದೀನನ ಬಾಯಲ್ಲಿ ನೀರೂರಿದ್ದಿತು. ತಾನೇ ಬಾದಶಹನಾದ ಮೇಲಂತೂ ಕೇಳುವುದೇನು ? ಯಾವಾಗ ದಕ್ಷಿಣ ಹಿಂದೂ ದೇಶವನ್ನು ಕೊಳ್ಳೆಹೊಡೆದು ಸಂಪತ್ತನ್ನು ತಂದೇನೊ ಎನಿಸುತಿದ್ದಿತು. ಆದರೆ ಆಗಲೇ ಚಿಕ್ಕಪ್ಪನನ್ನು ಕೊಂದು ರಾಜ್ಯವನ್ನಪಹರಿಸಿದೀತನಿಗೆ ಉತ್ತರದಲ್ಲಿಯೇ ಹಲವರು ರಾಜರ ಕೂಡ ಕಾದಬೇಕಾಯಿತು. ರಾಜ್ಯಲೋಭಿಯೂ ಸ್ತ್ರೀಲೋಭಿಯೂ ಆದ ಈತನು ೮-೧೦ ವರ್ಷಗಳ ವರೆಗೆ ರಜಪೂತರೊಡನೆಯೂ ಉತ್ತರದಲ್ಲಿಯ ಮಿತ್ರೇತರ ಮುಸಲ್ಮಾನರೊಡನೆಯೂ ಕಾದಿದನು. ತನ್ನ ಸೇನಾನಾಯಕನಾದ ಮಲಿಕಕಾಫರನನ್ನು

ದಕ್ಷಿಣದ ದಂಡಯಾತ್ರೆಗಾಗಿ ಕಳುಹಿದನು. ಮಲಿಕಕಾಫರನು ೧೩೦೭ ರಲ್ಲಿ ದಕ್ಷಿಣದ ಮೇಲೆ ಸಾಗಿ ಬಂದು ಓರಂಗಲ್ಲು ರಾಜ್ಯವನ್ನು ಒಕ್ಕಲಿಕ್ಕಿ (೧೩೦೯) ಹೊಯ್ಸಳ ಬಲ್ಲಾಳ ರಾಜನಾದ ಮುಮ್ಮಡಿ ಬಲ್ಲಾಳನನ್ನು ಸೆರೆ ಹಿಡಿದು ರಾಜಧಾನಿಯಾದ ದ್ವಾರಸಮುದ್ರವನ್ನು ಧ್ವಂಸಮಾಡಿದನು. (೧೩೧೦)

ದೇವಗಿರಿಯ ರಾಮದೇವನ ಮಗನಾದ ಶಂಕರದೇವನು ದಿಲ್ಲಿಯ ಸುಲ್ತಾನನ ಕೂಡ ಒಪ್ಪಂದ ಮಾಡಿಕೊಂಡು ಇದುವರೆಗೂ ಕಪ್ಪ ಕಾಣಿಕೆಗಳನ್ನು ಸಲ್ಲಿಸುತ್ತಿದ್ದನು. ಆದರೆ ಇದೂ ಮಲಿಕಕಾಫರನಿಗೆ ಸಮನಿಸಲಾಗದೆ ಹೋಯಿತು. ಕಾಕತೀಯರ ಮೇಲೆಯೂ ಹೊಯ್ಸಳರ ಮೇಲೆಯೂ ಸಾಗಿ ಹೋದಾಗ ತನಗೆ ಸಹಾಯ ಮಾಡಲಿಲ್ಲವೆಂದೂ ದಿಲ್ಲಿಯ ಸುಲ್ತಾನನಿಗೆ ಸಲ್ಲಬೇಕಾದ ಕಪ್ಪಕಾಣಿಕೆ ಕೊಡಲಿಲ್ಲವೆಂದೂ ನೆವಮಾಡಿ ಮತ್ತೊಮ್ಮೆ ದೇವಗಿರಿಯ ಮೇಲೆ ಸಾಗಿಹೋಗಿ ಶಂಕರದೇವನನ್ನು ಕೊಂದುಹಾಕಿ ದೇವಗಿರಿಯನ್ನೇ ತನ್ನ ರಾಜಧಾನಿಯಾಗಿ ಮಾಡಿಕೊಂಡು ದಿಲ್ಲಿಯ ಸುಲ್ತಾನನಿಗೆ ಸಲ್ಲಬೇಕಾದ ಕಪ್ಪ ಕಾಣಿಕೆಗಳನ್ನು ಕಳಿಸಿಕೊಡುತ್ತ ತಾನೇ ರಾಜ್ಯಭಾರ ಮಾಡತೊಡಗಿದನು. ಇಂತು ದಕ್ಷಿಣದ ಮೂರೂ ಸಾಮ್ರಾಜ್ಯಗಳು ಮಲಿಕಕಾಫರನ ಬಾಯಿಗೆ ಬಿದ್ದವು. ಇಷ್ಟೇ ಅಲ್ಲ, ಅವನ ವಿಜಯ ಯಾತ್ರೆಯು ರಾಮೇಶ್ವರದ ವರೆಗೂ ಸಾಗಿತು.

ಮಲಿಕಕಾಫರನ ದಾಳಿಗೆ ಮೊದಲು, ದಕ್ಷಿಣದ ರಾಜ ಸಮ್ರಾಜರು ತಮ್ಮ ತಮ್ಮೊಳಗೆ ಬಡಿದಾಡುತ್ತಿದ್ದರೂ ಪ್ರಜೆಗಳಿಗದರಿಂದ ವಿಶೇಷ ತೊಂದರೆಯಿದ್ದಿಲ್ಲ. ಒಬ್ಬನ ಸೇನೆಯು ಸೋತರೇನು ಇನ್ನೊಬ್ಬನದು ಗೆದ್ದರೇನು! ಒಬ್ಬನು ಮಾಂಡಲಿಕನಾದರೇನು ಇನ್ನೊಬ್ಬನು ಸಮ್ರಾಜನಾದರೇನು! ಅವೆಲ್ಲವು ಸಾಮಾನ್ಯಪ್ರಜೆಗಳ ದೃಷ್ಟಿಯಿಂದ ಒಂದೇ ಆಗಿ

ದ್ದಿತು. ಅರಸನಿಗೆ ಸಲ್ಲಬೇಕಾದ ಆದಾಯವನ್ನು ಸಲ್ಲಿಸಿದರೆ ತೀರಿತು,
ಅವರ ಎಲ್ಲ ವ್ಯವಹಾರವೂ ಸುಸೂತ್ರವಾಗಿ ಸಾಗುತ್ತಿದ್ದಿತು. ಹೊಸದಾಗಿ
ಬಂದ ಈ ಮಲಿಕಕಾಫರನ ದಾಳಿಯು ಅವರಿಗೆ ಹೊಸ ಬಗೆಯದೇ
ಆಯಿತು. ಆತನು ಹೋದಲ್ಲೆಲ್ಲ ಊರುಗಳನ್ನು ಕೊಳ್ಳೆಹೊಡೆದು ಇದ್ದ
ಬಿದ್ದ ಸಂಪತ್ತನ್ನೆಲ್ಲ ಸೂರೆಮಾಡಿದನು; ಹಿಂದುಗಳ ದೇವಾಲಯಗಳನ್ನು
ಹಾಳುಮಾಡಿದನು; ಮೂರ್ತಿಗಳನ್ನು ತುಂಡು ತುಂಡು ಮಾಡಿದನು.
ಇದರಿಂದ ಎಲ್ಲ ಕಡೆಗೂ ಹಾಹಾಕಾರ ವೆದ್ದಿತು. ಆವಾಗ ಜನರು ಇದು
ಹೀಗೆಯೇ ಸಾಗಿದರೆ ತಮ್ಮ ಸಂಸ್ಕೃತಿಗೆ, ತಮ್ಮ ಧರ್ಮಕ್ಕೆ ಉಳಿವಿಲ್ಲ
ವೆಂದು ತಿಳಿದರು. ಇನ್ನೇನು ಮಾಡಬೇಕೆಂದು ಚಡಪಡಿಸ ತೊಡಗಿದರು.
ಹವ್ವ ಹಾರಿ ಕುಳಿತರು !

ಮಲಿಕಕಾಫರನು ಬಹುದಿವಸ ದಕ್ಷಿಣದಲ್ಲಿ ನಿಲ್ಲಲಿಲ್ಲ. ದಿಲ್ಲಿಯ
ಸಿಂಹಾಸನದ ಮೇಲೆ ಅವನದೂ ಕಣ್ಣು ಇತ್ತು. ಕಾರಣಾಂತರದಿಂದ
ಅವನು ದಿಲ್ಲಿಗೆ ಹೋಗಬೇಕಾಯಿತು. ಆಗ ಅವನು ಅಲ್ಲಾವುದ್ದೀನನನ್ನು
ಕೊಂದು ರಾಜ್ಯವನ್ನೆತ್ತಿ ಹಾಕಬೇಕೆಂದೆಣಿಸಿದನು. ಆ ಪ್ರಕಾರ ಕೊಂದುದೂ
ಆಯಿತು. ಆದರೆ ಉಳಿದ ಸರದಾರರು ಅವನ ಆಟ ಸಾಗಗೊಡದೆ ಅವ
ನನ್ನು ಕೊಂದು ಹಾಕಿ ಅಲ್ಲಾವುದ್ದೀನನ ಮಗನಾದ ಮುಬಾರಕನನ್ನು
ಪಟ್ಟಕ್ಕೆ ಕುಳ್ಳಿರಿಸಿದರು.

ಮಲಿಕಕಾಫರನು ದಿಲ್ಲಿಯ ಕಡೆಗೆ ಹೋಗಲು ದಕ್ಷಿಣದವರಿಗೆ ಸ್ವಲ್ಪ
ಸಮಾಧಾನವಾಯಿತು. ದೇವಗಿರಿಯ ರಾಮದೇವನ ಅಳಿಯನಾದ ಹರ
ಪಾಲನು ಹಿಂದುಳಿದ ಮುಸಲ್ಮಾನ ಸೈನ್ಯವನ್ನು ಹೊಡೆದೋಡಿಸಿ ಯಾದವ
ರಾಜ್ಯದ ಸೂತ್ರಗಳನ್ನು ಕಯ್ಯಲ್ಲಿ ತೆಗೆದುಕೊಂಡನು. ಮಲಿಕಕಾಫರನ
ಸೆರೆಯಿಂದ ಮುಕ್ತನಾದ ಬಲ್ಲಾಳದೇವನು ದ್ವಾರಸಮುದ್ರವನ್ನು ಪುನಃ
ಕಟ್ಟಿಸಿ ನಗರವನ್ನು ಸಿಂಗರಿಸಿ ಆಳತೊಡಗಿದನು. ಈ ಪ್ರಕಾರ ಯಾದವ

ಹೊಯ್ಸಳ ರಾಜ್ಯಗಳು ಮತ್ತೆ ತಲೆಯೆತ್ತಬೇಕೆಂದು ಮಾಡಿದುವು. ಆದರೆ ಅದು ಸಾಧ್ಯವಾಗಲಿಲ್ಲ ಆ ರಾಜ್ಯಗಳ ಆಯುಷ್ಯವೇ ತುಂಬಿ ಬಂದಿದ್ದಿತು. ದಿಲ್ಲಿಯ ಸಿಂಹಾಸನಸ್ಥನಾದ ಮುಬಾರಕನು ಸೈನ್ಯ ಸಮೇತನಾಗಿ ಬಂದು ಹರಪಾಲನನ್ನು ಸೋಲಿಸಿ ಅವನ ಮೈದೊಗಲನ್ನು ಸುಲಿಸಿ ತಲೆಗಡಿದು ದೇವಗಿರಿಯ ಕೋಟೆಯ ಮೇಲಿರಿಸಿದನು. (೧೩೧೮). ಮುಬಾರಕನ ತರುವಾಯ ದಿಲ್ಲಿಯಲ್ಲಿ ಆಳಿದ ತಘಲಖ ಮನೆತನದಲ್ಲಿಯ ಮಹಮ್ಮದ ಬಿನ್ ತಘಲಖನೆಂಬವನು ದಕ್ಷಿಣದ ಮೇಲೆ ಸಾಗಿ ಬಂದು ಬಲ್ಲಾಳದೇವನನ್ನು ಸೋಲಿಸಿ ಓಡಿಸಿದನು. ಆದಾಗ ಹೊಯ್ಸಳ ಬಲ್ಲಾಳದೇವನು ತಿರುವಣ್ಣಾಮಲೆಗೆ ಹೋಗಿ ಆಳತೊಡಗಿದನು. (೧೩೨೯).

ಮುಸಲ್ಮಾನರ ಹಾವಳಿಯನ್ನು ತಡೆಯುವ ಪ್ರಯತ್ನವೇನೋ ನಡೆದೇ ಇದ್ದಿತು. ಇದೀಗ "ಕುರುಡರಲ್ಲಿ ಮೆಳ್ಳ ಶ್ರೇಷ್ಠ!" ಎಂಬಂತೆ ಇದ್ದು ಬಿದ್ದವರೊಳಗೆ ಆನೆಗುಂದಿಯ ಜಂಬುಕೇಶ್ವರನೇ ದೊಡ್ಡವನಾಗಿದ್ದನು. ಅವನೂ ಮುಸಲ್ಮಾನರಿಗೆ ಎದುರಾಗುವ ಸಾಹಸ ಮಾಡಿದನು. ಅದರಿಂದ ಆಗುವುದೇನು, ಹನುಮನ ಮುಂದೆ ಹಾರುವ ಗುಬ್ಬಿಯೆ ? ಆದುದು ಎಲ್ಲರಂತೆ ಅವನೂ ಧಾರಾ ತೀರ್ಥದಲ್ಲಿ ಮಡಿದನು. ಅವನ ಹೆಂಡಿರು ಮಕ್ಕಳೆಲ್ಲರೂ ಚಿತೆಯಲ್ಲಿ ಬಿದ್ದು ಪ್ರಾಣ ಕೊಟ್ಟರು. ಐದಾರು ಶತಮಾನಗಳಿಂದ ಸಾಗಿ ಬಂದ ಆನೆಗುಂದಿಯ ರಾಜಮನೆತನವು ಮಣ್ಣು ಪಾಲಾಯಿತು. ಮುಸಲ್ಮಾನರ ಹಾವಳಿಗೆ ಮೇರೆಯಿಲ್ಲದಾಯಿತು. ಹಲವರು ಅರಸರು ದೇಶಭ್ರಷ್ಟರಾಗಿ ಸಂಚರಿಸ ತೊಡಗಿದರು. ದಕ್ಷಿಣದ ಸಂಪತ್ತು ಸೂರೆಯಾಯಿತು ! ಎಲ್ಲ ಕಡೆಗೂ ಹಾಹಾಕಾರವೆದ್ದಿತು !!



# ೩ ಸಾಮ್ರಾಜ್ಯ ಸ್ಥಾಪನೆ.

ಮುಸಲ್ಮಾನರು ದಕ್ಷಿಣದ ಮೇಲೆ ದಾಳಿ ಮಾಡಿದ್ದು ಧರ್ಮ ಪ್ರಸಾರಕ್ಕಲ್ಲ; ಹಿಂದೂ ಧರ್ಮವನ್ನು ನಷ್ಟಪಡಿಸಬೇಕೆಂಬ ಉದ್ದೇಶ ದಿಂದಲೂ ಅಲ್ಲ. ತಮ್ಮ ಸಾಮ್ರಾಜ್ಯವನ್ನು ಬೆಳೆಸುವುದಕ್ಕಾಗಿ; ದೇಶ ವನ್ನು ಕೊಳ್ಳೆಹೊಡೆದು ಸಂಪತ್ತನ್ನು ಸೂರೆಗೊಯ್ಯುವುದಕ್ಕಾಗಿ ! ಸಂಪತ್ತು ಸೂರೆಯಾದುದಕ್ಕಾಗಿ ಹಿಂದುಗಳಿಗೆ ತಳಮಳವಾದುದೇನೋ ನಿಜ. ಆದರೆ ಅದಕ್ಕೂ ಹೆಚ್ಚಿನ ತಳಮಳವಾದುದು ಅವರ ಧಾರ್ಮಿಕ ಭಾವನೆಯ ಮೇಲಾದ ಆಘಾತದಿಂದ. ದೇವಾಲಯಗಳ ನಾಶದಿಂದ, ತಮ್ಮೆದುರಿನಲ್ಲಿಯೇ ನಡೆದ ಗೋಸಂಹಾರದಿಂದ ಹಿಂದುಗಳಿ ಗಾದ ದುಃಖವು ಅಷ್ಟಿಷ್ಟೆಂದಲ್ಲ. ಇದೊಂದು ತಮ್ಮ ಧರ್ಮದ ಮೇಲೆ ಬಂದ ದೊಡ್ಡ ಗಂಡಾಂತರವೇ ಎಂದೆನಿಸಿತವರಿಗೆ. ನೆರೆಮನೆಗೆ ಬೆಂಕಿ ಹತ್ತಿದಾಗ ನೋಡಿ ಸಂತೋಷ ಪಡುತ್ತಿದ್ದ ಮಹಾ ಮನುಷ್ಯರಂತೆ ಮುಸಲ್ಮಾನರ ದಾಳಿಗೆ ಸಿಕ್ಕು ಒದ್ದಾಡುತ್ತಿರುವ ರಾಜರನ್ನು ನೋಡಿ ಸಂತೋಷಪಡುತ್ತಿದ್ದ ರಾಜಮಹಾರಾಜರೆಲ್ಲರಿಗೂ ಒಂದೇ ಗತಿಯಾದ ಮೇಲೆ ಇನ್ನು ತಾವೆಲ್ಲರೂ ಒಕ್ಕಟ್ಟಾಗಿ ಮುಸಲ್ಮಾನರನ್ನೆದುರಿಸದೆ ಗತಿಯಿಲ್ಲವೆಂದೆನಿಸಿತು. ಪ್ರತಿಯೊಬ್ಬರಿಗೂ ಹಾಗೇನೊ ಎನಿಸುತ್ತಿತ್ತು. ಆದರೆ ಅಂತಹ ಸಂಘಟನೆಯನ್ನು ಮಾಡುವವರಾರು? ಆ ಕೆಲಸಕ್ಕೆ ಒಂದು ವಿಭೂತಿಯು ಬೇಕಾಗಿದ್ದಿತು. ಅದಾವಕಾಲಕ್ಕೆ ಸತ್ಯಧರ್ಮಕ್ಕೆ ಚ್ಯುತಿಬರುವುದೊ, ಅದಾವಾಗ ಸಾಧು ಸಜ್ಜನರ ಮೇಲೆಯೂ ಜನ ಸಾಮಾನ್ಯದ ಮೇಲೆಯೂ ಹಿಂಸೆಯು ನಡೆಯುವುದೋ, ಆ ಬಹು ಜನ ಸಮಾಜವು ತ್ರಾಹಿ ತ್ರಾಹಿ ಎಂದು ಗೋಳಾಡುವಾಗ ಜಗದೀಶನಲ್ಲಿ

ಮೊರೆಯಿಡುವುದೊ ಆಗ ಅಂತಹ ವಿಭೂತಿಯು ಅವತಾರವಾಗುವುದು.*
ಪರಿಸ್ಥಿತಿಯೇ ಅಂತಹ ಮಹಾತ್ಮನೊಬ್ಬನಿಗೆ ಜನ್ಮವೀಯುವುದು.
ದಕ್ಷಿಣ ದೇಶದಲ್ಲಾಗ ಇಂತಹ ಕಾಲವು ಬಂದಿದ್ದಿತು. ಕಾಲಕ್ಕೆ ಸರಿ
ಯಾಗಿ ಅಂತಹ ಮಹಾತ್ಮನೊಬ್ಬನೂ ಉದಿಸಿದನು. ಆ ಮಹಾ
ತ್ಮನೇ ವಿದ್ಯಾರಣ್ಯನು !

'ವಿದ್ಯಾರಣ್ಯ' ಎಂಬುದು ಆ ಮಹಾತ್ಮನ ಸಂನ್ಯಾಸಾಶ್ರಮದ
ಹೆಸರು. ಪೂರ್ವಾಶ್ರಮದ ಹೆಸರು ಮಾಧವ ಎಂಬುದು. ತುಂಗ
ಭದ್ರಾತೀರದ ಪಂಪಾ ಕ್ಷೇತ್ರದಲ್ಲಿ ಬಡತನದಲ್ಲಿ ಬಾಳ್ವೆಮಾಡಿಕೊಂಡಿ
ರುವ ಸಚ್ಛೀಲನಾದ ಬೋಧಾಯನ ಸೂತ್ರದ ಯಜುಶ್ಶಾಖೆಯ ಭಾರ
ದ್ವಾಜಗೋತ್ರದ ಮಾಯಣ ಪಂಡಿತನ ಪತ್ನಿಯಾದ ಪತಿವ್ರತಾ
ಶಿರೋಮಣಿ ಶ್ರೀಮತಿಯ ಉದರದಿಂದ ಜನಿಸಿದನೀ ಮಹಾತ್ಮ.
ಸಾಯಣ ಭೋಗನಾಥರೆಂಬವರು ಇವನ ತಮ್ಮಂದಿರು ಈ ಮೂವ
ರಿಗೂ ಮಾಯಣ ಪಂಡಿತರು ತಮಗೆ ಬರುವಷ್ಟು ವಿದ್ಯೆಯನ್ನು ಹೇಳಿ
ಕೊಟ್ಟರು. ಆದರೆ ಅಷ್ಟಕ್ಕೆಯೆ ತೃಪ್ತರಾಗದೆ ಈ ಸಹೋದರರು ಚಿಕ್ಕ
ವಯಸ್ಸಿನಲ್ಲಿಯೇ ಮನೆಮಾರು ತೊರೆದು ಕಾಂಚೀಪುರಕ್ಕೆ ಹೋಗಿ
ಅಲ್ಲಿ ಸರ್ವಜ್ಞವಿಷ್ಣು (ವಿದ್ಯಾತೀರ್ಥ) ಎಂಬ ಹೆಸರಾದ ಪಂಡಿತರ
ಹತ್ತಿರ ವಿದ್ಯೆಕಲಿತು ವೇದೋಪನಿಷತ್ತುಗಳಲ್ಲಿಯೂ ಸಕಲ ಶಾಸ್ತ್ರ
ಗಳಲ್ಲಿಯೂ ಪಾರಂಗತರಾದರು. ವಿದ್ಯಾಭ್ಯಾಸವು ಮುಗಿದ ಮೇಲೆ
ಮಾಧವಾಚಾರ್ಯರು ತಮ್ಮಂದಿರೊಂದಿಗೆ ತಿರುಗಿ ಪಂಪಾಕ್ಷೇತ್ರಕ್ಕೆ

---

* ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ.

ಬಂದು ತಮ್ಮ ಕುಲದೇವತೆಯಾದ ಭುವನೇಶ್ವರಿಯ ಆರಾಧನೆ ಮಾಡುತ್ತ ಪಾಠಶಾಲೆಯನ್ನು ತೆಗೆದು ಹಲವರು ಶಿಷ್ಯರಿಗೆ ವಿದ್ಯಾಭ್ಯಾಸವನ್ನು ಮಾಡಿಸತೊಡಗಿದರು. ವೇದಾಂತದ ಮರ್ಮವು ಸಾಮಾನ್ಯರಿಗೂ ಸುಲಭವಾಗಿ ತಿಳಿಯ ಬೇಕೆಂದು ಆ ಬಗೆಯ ಗ್ರಂಥ ರಚನೆಯನ್ನು ಮಾಡತೊಡಗಿದರು.

ಮುಸಲ್ಮಾನರಿಂದ ಹಿಂದೂ ಧರ್ಮದವರಿಗಾಗುತಿದ್ದ ಹಿಂಸೆಯು ಇವರ ಕಿವಿಯ ಮೇಲೆ ಬೀಳುತ್ತಲೇ ಇತ್ತು. ಅವರಲ್ಲಿ ತಮ್ಮ ಆನೆಗುಂದಿ ಸಂಸ್ಥಾನದ ಗತಿಯನ್ನು ನೋಡಿ ಆಚಾರ್ಯರ ಕಣ್ಣುಗಳು ಪೂರ್ಣ ತೆರೆದುವು "ಎಲಾ ಇದೇನು, ಈ ವೇದಪಾಠ, ಗ್ರಂಥ ರಚನೆ, ಈ ಪಾಠಶಾಲೆ, ಈ ಶಿಷ್ಯವರ್ಗ ಎಲ್ಲವೂ ಏತಕ್ಕಾಗಿ! ಜನರಿಗೆ ಧರ್ಮದ ತಿಳುವಳಿಕೆಯಾಗಬೇಕೆಂದಲ್ಲವೆ? ಆ ಹಿಂದೂ ಧರ್ಮಕ್ಕೆಯೆ ಇದೀಗ ಈ ಗತಿ. ಈ ಮುಸಲ್ಮಾನರ ಹಾವಳಿಯನ್ನು ತಡೆವರೆಯೆ ನಮ್ಮ ಧರ್ಮವು ಜೀವದಿಂದುಳಿಯಬಹುದು; ಈ ಹಾವಳಿಯು ನಿಂತ ಮೇಲೆ ಗ್ರಂಥಗಳನ್ನು ಬರೆಯ ಬಹುದು, ಪಾಠಶಾಲೆಯನ್ನು ತೆಗೆಯಬಹುದು, ಧಾರ್ಮಿಕ ವಿಚಾರಗಳನ್ನು ಜನರ ಮುಂದಿಡಬಹುದು; ಮುಂದಿನದು ಮುಂದೆ! ಈಗ ಈ ಹಾವಳಿಯನ್ನು ತಡೆಯುವಂತಹ ಸಾಮ್ರಾಜ್ಯವೊಂದನ್ನು ಸ್ಥಾಪಿಸುವುದು ಮೊದಲನೆಯ ಕೆಲಸ. ಏನುಮಾಡಲಿ! ಯಾವ ಬಗೆಯಿಂದ ಸಾಮ್ರಾಜ್ಯವನ್ನು ಸ್ಥಾಪಿಸಬಹುದು! ಅದು ನನ್ನ ಕೆಲಸವೆ! ಅಂತಹ ರಾಜ ಮಹಾರಾಜರು ಈಗ ಎಲ್ಲಿರುವರು!" ಎಂಬ ಹಲವು ಬಗೆಯ ವಿಚಾರಗಳು ಅವರ ತಲೆಯಲ್ಲಿ ತಾಕಲಾಡತೊಡಗಿದುವು. ಆದಾಗ ಮುಸಲ್ಮಾನರ ಹೊಡೆತದಿಂದ ದೇಶಭ್ರಷ್ಟರಾಗಿ ತಿರುಗುವ ಹಲವರು ರಾಜರನ್ನು ನೋಡಿ ಈ ಎಲ್ಲರನ್ನು ಒಟ್ಟುಗೂಡಿಸಿದರೆ ಆದೊಂದು ದೊಡ್ಡ

ಶಕ್ತಿಯು ಉತ್ಪನ್ನವಾಗಿ ಮುಸಲ್ಮಾನರ ಹಾವಳಿಯನ್ನು ಸಹಜವಾಗಿ ತಡೆಯಬಹುದೆಂದೆನಿಸಿತವರಿಗೆ. ಅದೇನೊ ಸರಿ, ಅಂತಹ ಶಕ್ತಿಯನ್ನು ಉಂಟು ಮಾಡುವುದು ಹೇಗೆ? ಉಂಟುಮಾಡಿದರೂ ಮುಸಲ್ಮಾನರ ದಾಳಿಯನ್ನು ಎದುರಿಸುವ ಸಾಮರ್ಥ್ಯವನ್ನು ತಂದುಕೊಳ್ಳಲು ಹಣವೆಲ್ಲಿಂದ ತರಬೇಕು? ತನ್ನಲ್ಲಿರುವುದೇನು? ಸೈನ್ಯವೇ? ಹಣವೆ? ಏನಿದೆ! ಇದ್ದುದು ಒಂದೇ ಒಂದು, ಧರ್ಮದ ಬಗ್ಗೆ ಹಂಬಲ; ಆ ಧರ್ಮವನ್ನು ಊರ್ಜಿತಸ್ಥಿತಿಗೆ ತರಬೇಕೆಂಬ ಮನಸು! ಇದೊಂದರಿಂದ ಈ ರಾಜರ ಮೇಲೆ ವರ್ಚಸ್ಸು ಕೂಡಿಸಿ ಆ ಶಕ್ತಿಯನ್ನು ಉಂಟುಮಾಡಬಹುದು; ಹಣವನ್ನೂ ದೊರಕಿಸಬಹುದು. ಆದರೆ ಇದೆಲ್ಲ ಪ್ರಾಪಂಚಿಕನಾಗಿರುವವನಿಗೆ ಸಾಧ್ಯವಿಲ್ಲ. ಮನೆಯ ಮೇಲೆ ತುಲಸೀಪತ್ರವನ್ನಿಟ್ಟು ವಿಶ್ವಕುಟುಂಬಿಯಾದವನಿಂದಲೇ ಸಾಧ್ಯ. ಆದರಿಂದ ಈ ಪ್ರಪಂಚವನ್ನು ಕಿತ್ತೊಗೆದು ಸಂನ್ಯಾಸಿಯಾಗಿ ತಪಸ್ಸನ್ನಾಚರಿಸಿ ಅದರ ಸಾಮರ್ಥ್ಯದಿಂದಲೇ ಇದನ್ನು ಸಾಧಿಸಬೇಕೆಂದಾಲೋಚಿಸಿ ತಮ್ಮ ಪೂಜ್ಯಗುರುಗಳ ಪ್ರಮುಖ ಶಿಷ್ಯರಾದ ಭಾರತೀತೀರ್ಥರ ಬಳಿಗೆ ಹೋಗಿ ಸಂನ್ಯಾಸಾಶ್ರಮವನ್ನು ತೆಗೆದುಕೊಂಡರು (೧೩೩೧). ಮಾಧವಾಚಾರ್ಯರು ವಿದ್ಯಾರಣ್ಯರಾದರು.

ಆದಾರು ಸಂನ್ಯಾಸಿಗಳಾಗಿ ವಿಶ್ವಕುಟುಂಬಿಗಳಾಗುವರೊ ಅಂತಹರೆ ರಾಷ್ಟ್ರನಿರ್ಮಾಣಕ ಮಹಾತ್ಮರೆನಿಸಿಕೊಳ್ಳುವರು. ಇದುವರೆಗೂ ಆದ ಆಗುತ್ತಲಿರುವ ರಾಷ್ಟ್ರನಿರ್ಮಾಣಕ ಮಹಾತ್ಮರೆಲ್ಲರು ವಿದ್ಯಾರಣ್ಯರಂತೆ ಸಂನ್ಯಾಸಾಶ್ರಮವನ್ನು ತೆಗೆದುಕೊಳ್ಳದಿದ್ದರೂ ಅವರು ನಿಜವಾದ ಸಂನ್ಯಾಸಿಗಳೇ ಆಗಿರುವರು. ಆ ಸಂನ್ಯಾಸದಿಂದಲೇ ಅವರಲ್ಲಿ ಅಂತಹ ಶಕ್ತಿ ಬರುವುದು. ವಿದ್ಯಾರಣ್ಯರಂತೂ ಚತುರ್ಥಾಶ್ರಮವನ್ನು ಸ್ವೀಕರಿಸಿಯೇ ರಾಷ್ಟ್ರಕಾರ್ಯಕ್ಕೆ ನಡುಕಟ್ಟಿದರು. ಆಗ ಜನರು

ಸ್ವಾಭಾವಿಕವಾಗಿಯೇ ತಮ್ಮ ಸರ್ವಸ್ವವನ್ನು ಆ ಮಹಾತ್ಮನ ಪದ ತಲದಲ್ಲಿ ಅರ್ಪಿಸಿದರು. ಸುವರ್ಣ ವೃಷ್ಟಿಯೇ ಆಯಿತು ಮಹಾತ್ಮನ ಮುಂದೆ. ಆಗ ವಿದ್ಯಾರಣ್ಯರು ಆ ರಾಜಮಹಾರಾಜರಲ್ಲಿ ಸಾಮ್ರಾಜ್ಯ ಸ್ಥಾಪನೆಗೆ ಹರಿಹರನೇ ಯೋಗ್ಯನೆಂದು ನಿರ್ಣಯಿಸಿ ಅವನನ್ನೆ ಆ ಕೆಲಸಕ್ಕೆ ಮುಖಂಡನನ್ನಾಗಿ ಮಾಡಿದರು. ತುಂಗಭದ್ರೆಯ ಉತ್ತರ ದಲ್ಲಿರುವ ಆನೆಗುಂದಿಯು ಹೊಸ ಸಾಮ್ರಾಜ್ಯಕ್ಕೆ ಯೋಗ್ಯ ಸ್ಥಳವಲ್ಲ ವೆಂದು ಬಗೆದು, ದಕ್ಷಿಣ ತೀರದಲ್ಲಿರುವ ಪಂಪಾಕ್ಷೇತ್ರದಲ್ಲಿ ಹರಿ ಹರನಿಗೆ ಪಟ್ಟಗಟ್ಟಿ ಹೊಸ ಸಾಮ್ರಾಜ್ಯದ ಅಡಿಗಲ್ಲು ಹಾಕಿದರು.

ರಾಜ್ಯವನ್ನು ಕಳೆದುಕೊಂಡು ದೇಶಭ್ರಷ್ಟರಾಗಿ ಸಂಚರಿಸುತಿದ್ದ ರಾಜಮಹಾರಾಜರು, ಸೇನಾಪತಿಗಳು ಎಲ್ಲರೂ ಈ ನವೋದಿತ ರಾಜ ನನ್ನೆ ಆಶ್ರಯಿಸಿದರು. ರಾಷ್ಟ್ರದ ಶಕ್ತಿಯು ಏಕಮುಖವಾಯಿತು. ಮುಸಲ್ಮಾನರಿಗೆ ಒಂದು ಕೈ ತೋರಿಸಿ ಅವರನ್ನು ಹಣ್ಣುಮಾಡಿ ಹೊಡೆದೋಡಿಸಿದರು. ಪೂರ್ವದ ರಾಜರು ಹರಿಹರನ ಮಾಂಡಲಿಕ ರಾಗಿ ಮತ್ತೆ ತಮ್ಮತಮ್ಮ ರಾಜ್ಯಗಳನ್ನು ಸುಖದಿಂದ ಆಳತೊಡ ಗಿದರು. ಪಂಪಾಕ್ಷೇತ್ರವು ವಿಸ್ತಾರವಾಗುತ್ತ ದೊಡ್ಡನಗರವೇ ಆಯಿತು. ಆ ಹೊಸ ನಗರವೇ ವಿಜಯನಗರ. ವಿದ್ಯಾರಣ್ಯರ ಶುಭಾಶೀರ್ವಾದ ದಿಂದ ಸ್ಥಾಪಿತವಾದ ಈ ಕರ್ಣಾಟಕ ಸಾಮ್ರಾಜ್ಯವು ಇನ್ನೂರ ಮೂವತ್ತು ವರ್ಷಗಳವರೆಗೆ ಒಳ್ಳೇ ವೈಭವದಿಂದ ಮೆರೆದು ಭರತ ಖಂಡದವರದಷ್ಟೇ ಅಲ್ಲ ಪರದ್ವೀಪಸ್ಥರ ಕಣ್ಣನ್ನು ಕುಕ್ಕಿಸಿತು. ವಿದ್ಯಾರಣ್ಯರು ಸಾಮ್ರಾಜರ ರಾಜಗುರುಗಳಾಗಿ ರಾಜಕಾರ್ಯವನ್ನು ಮಾಡಿ ಭಾರತೀತೀರ್ಥರ ತರುವಾಯ ಶೃಂಗೇರಿಯ ಪೀಠಾಧಿಷ್ಠಿತರಾಗಿ ಧರ್ಮಗುರುಗಳೆನಿಸಿ ಶಕೆ ೧೩೦೮ ( ಕ್ರಿ. ಶ. ೧೩೮೬ ) ಕ್ಷಯನ್ನಾಮ ಸಂವತ್ಸರದ ಜ್ಯೇಷ್ಠ ಬಹುಳ ತ್ರಯೋದಶಿ ಶನಿವಾರ ದಿವಸ ವಿದ್ಯಾ

ನಗರದಲ್ಲಿಯೇ ಪಟ್ಟಾಭಿಷಿಕ್ತರಾದರು. ವಿದ್ಯಾರಣ್ಯರ ಕಾಲದಿಂದ ಇಂದಿನ ವರೆಗೂ ಶೃಂಗೇರಿಯ ಪೀಠದ ಸ್ವಾಮಿಗಳಿಗೆ "ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ ಶ್ರೀಮದ್ರಾಜಾಧಿರಾಜ ರಾಜಗುರು" ಎಂಬ ಬಿರುದು ನಡೆದು ಬಂದಿದೆ.

# ೪ ಹರಿಹರ.

ವಿಜಯನಗರ ಸಾಮ್ರಾಜ್ಯವೆಂದಕೂಡಲೆ ಹುಕ್ಕ ಬುಕ್ಕ ವಿದ್ಯಾರಣ್ಯರೆಂಬ ಮೂರು ವ್ಯಕ್ತಿಗಳು ಕಣ್ಣಮುಂದೆ ನಿಲ್ಲುತ್ತವೆ. ವಿದ್ಯಾರಣ್ಯರು ಸೂತ್ರಧಾರರಾಗಿ ನಾಟಕವನ್ನು ನಡಿಸಿದವರು. ಹುಕ್ಕ ಬುಕ್ಕರು ಆ ರಂಗಭೂಮಿಯ ಮೇಲಿನ ನಟರು. ಈ ಹರಿಹರ ಬುಕ್ಕ ವಿದ್ಯಾರಣ್ಯರ ವಿಷಯದಲ್ಲಿಯೂ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ವಿಷಯದಲ್ಲಿಯೂ ಅನೇಕ ಆಖ್ಯಾಯಿಕೆಗಳಿವೆ.

ಮಹಮ್ಮದ ಬಿನ್ ತಘಲಖನು ಆನೆಗುಂದಿಯ ಸಂಸ್ಥಾನವನ್ನು ವಶಪಡಿಸಿಕೊಂಡ ಮೇಲೆ ಅಲ್ಲೊಬ್ಬ ಸರದಾರನನ್ನು ಇರಿಸಿ ದಿಲ್ಲಿಗೆ ತಿರುಗಿ ಹೋದನೆಂತಲೂ, ಸುಲ್ತಾನನ ಮೋರೆಯು ಅತ್ತ ದಿಲ್ಲಿಯಕಡೆಗೆ ಆಗಲು ಇತ್ತ ಜನರು ಬಂಡೆಬ್ಬಿಸಿದರೆಂತಲೂ, ಆ ಬಂಡು ಶಾಂತವಮಾಡುವುದಕ್ಕಾಗಿ ಮಹಮ್ಮದನು ಜಂಬುಕೇಶ್ವರನ ದಿವಾಣನಾದ ಹರಿಹರರಾಯನನ್ನು ಆ ರಾಜ್ಯಕ್ಕೆ ಅಧಿಕಾರಿಯನ್ನಾಗಿ ನಿಯಮಿಸಿ ಕಳಿಸಿದನೆಂತಲೂ, ಈ ಹರಿಹರನು ಒಂದು ದಿವಸ ತುಂಗಭದ್ರೆಯ ದಕ್ಷಿಣದ ಗುಡ್ಡದೊಳಗೆ ಬೇಟೆಯಾಡಲಿಕ್ಕೆ ಹೋದಾಗ ಬೇಟೆಯ ನಾಯಿಗಳನ್ನು ಮೊಲವು ಬೆನ್ನಟ್ಟಿತೆಂತಲೂ, ಇದನ್ನು ಕಂಡು ಅರಸು ಆಶ್ಚರಿಗೊಂಡು ವಿಚಾರ ಮಾಡುತ್ತ ತಿರುಗಿ ಬರುತ್ತಿರುವಾಗ ಹೊಳೆಯ ದಂಡೆಯ ಮೇಲೆ ಬೆಟ್ಟಿಯಾದ ಮಾಧವಾಚಾರ್ಯರಿಗೆ ಈ ಸಂಗತಿಯನ್ನು ತಿಳಿಸಿದನೆಂತಲೂ, ಆಗ ಅವರ ಹೇಳಿಕೆಯ ಪ್ರಕಾರ ಆ ಸ್ಥಳದಲ್ಲಿ ಒಂದು ಪಟ್ಟಣವನ್ನು ಕಟ್ಟಿಸಿ ಆನೆಗುಂದಿಯನ್ನು ಬಿಟ್ಟು ಆ ನಗರವನ್ನೇ

ರಾಜಧಾನಿಯಾಗಿ ಮಾಡಿಕೊಂಡು ಆಳತೊಡಗಿದನೆಂತಲೂ ಒಬ್ಬರು ಹೇಳುವರು.

ಮತ್ತೆ ಕೆಲವರು ಹೇಳುವುದೇನೆಂದರೆ, ಮುಸಲ್ಮಾನರು ಓರಂಗಲ್ಲು ರಾಜ್ಯವನ್ನು ಹಾಳು ಮಾಡಿದ ಮೇಲೆ ಅಲ್ಲಿಯ ಬೊಕ್ಕಸದ ಅಧಿಕಾರಿಗಳಾಗಿದ್ದ ಹುಕ್ಕ ಬುಕ್ಕರೆಂಬ ಅಣ್ಣತಮ್ಮಂದಿರು ಮಾಧವಾಚಾರ್ಯರೆಂಬ ಬ್ರಾಹ್ಮಣರನ್ನೊಡಗೊಂಡು ಆನೆಗುಂದಿಯ ಬಳಿಯಲ್ಲಿ ತುಂಗಭದ್ರೆಯ ದಕ್ಷಿಣದಲ್ಲಿರುವ ಗಡ್ಡಗಾಡು ಪ್ರದೇಶಕ್ಕೆ ಕೆಲವು ಪರಿವಾರದ ಸಹಿತವಾಗಿ ಓಡಿಬಂದು ಆ ಪ್ರದೇಶದ ಅಧಿಪತಿಗಳಾಗಿ ವಿಜಯನಗರವೆಂಬ ಪಟ್ಟಣವನ್ನು ಕಟ್ಟಿಸಿ ಆಳತೊಡಗಿದರು.

ಬೇರೆ ಕೆಲವರು "ಸಂನ್ಯಾಸಿಯಾದ ಮಾಧವನು ನೆಲದಲ್ಲಿ ಹೂಳಿಟ್ಟ ನಿಧಿಯನ್ನು ಕಂಡು ಆ ಸ್ಥಳದಲ್ಲಿ ಒಂದು ಪಟ್ಟಣವನ್ನು ಕಟ್ಟಿಸಿ ತನ್ನ ಮರಣಕಾಲದ ವರೆಗೆ ಆಳಿದನು. ಆ ಮೇಲೆ ಕುರುಬ ವಂಶದವರಲ್ಲಿ ಆಳತೊಡಗಿದರು.

ಇನ್ನೂ ಹಲವರು ಹಲವು ಬಗೆಯಾಗಿಯೇ ಹೇಳುವರು. ದಕ್ಷಿಣದ ಪ್ರತಿಯೊಂದು ರಾಜ್ಯದ ಸ್ಥಾಪನೆಯ ವಿಷಯದಲ್ಲಿ ಇಂತಹ ಒಂದಿಲ್ಲೊಂದು ಆಖ್ಯಾಯಿಕೆಯು ಇದ್ದೇ ಇದೆ. "ಕಥೆಗೆ ಕಾಲಿಲ್ಲ" ವೆಂಬಂತೆ ನಮ್ಮ ಪೂರ್ವಿಕರ ಚರಿತೆಗಳೆಲ್ಲವೂ ಕಥೆಗಳಾಗಿ ಪರಿಣಮಿಸಿ ಇತಿಹಾಸಕ್ಕೆ ತಳಹದಿಯೇ ಇಲ್ಲವಾಗಿದೆ. ಆದರೆ ಇದೀಗ ಇತಿಹಾಸ ಸಂಶೋಧನದಿಂದ ನಮ್ಮ ಪೂರ್ವಿಕರ ಚರಿತ್ರೆಯ ಮೇಲೆ ಅಲ್ಪಸ್ವಲ್ಪ ಪ್ರಕಾಶ ಬೀಳತೊಡಗಿದೆ. ಆ ಅರುಣೋದಯದ ಪ್ರಕಾಶದಲ್ಲಿ ನಾವು ಕಣ್ಣಿಗೆ ಕಾಣುವ ಒಂದಷ್ಟರಕೂಡ ಬುದ್ಧಿಗೆ ತೋರುವ ಮಾತ್ರವನ್ನು ಬೆರಿಸಿ ವಿಜಯನಗರ ಸಾಮ್ರಾಜ್ಯದ ಮೂಲಪುರುಷನಾದ ಹರಿಹರನ ವಿಷಯದಲ್ಲಿ ಇಷ್ಟು ಮಾತ್ರ ಹೇಳಬಹುದು:—

ಹೊಯ್ಸಳ ಸಾಮ್ರಾಜ್ಯದಲ್ಲಿ ಮಾಂಡಲಿಕನಾಗಿದ್ದನು ಸಂಗಮ ನೆಂಬರಸು. ಕಾಮಾಂಬಿಕೆಯು ಆತನ ಪತ್ನಿ. ಹುಕ್ಕ ಬುಕ್ಕರು ಈ ಸಂಗಮರಾಜನ ಮಕ್ಕಳು. ಹೊಯ್ಸಳ ಸಾಮ್ರಾಜ್ಯವು ಮುಸಲ್ಮಾನರ ದವಡೆಯಲ್ಲಿ ಸಿಕ್ಕು ನುಗ್ಗುನುಗ್ಗಾಗಿ ಹೋದ ಮೇಲೆ ಹೊಯ್ಸಳ ಸಾಮ್ರಾಜ್ಯದಲ್ಲಿದ್ದ ಮಾಂಡಲಿಕರು ಸ್ವತಂತ್ರರಾಗಲು ಯತ್ನಿಸಿದರು. ಕೃಷ್ಣಾನದಿಯ ದಕ್ಷಿಣದಲ್ಲಿ ಮುಸಲ್ಮಾನರ ರಾಜ್ಯವು ಸ್ಥಿರ ಸ್ಥಾವರ ವಾಗಿರಲಿಲ್ಲ. ಹೊಯ್ಸಳ ಸಾಮ್ರಾಜ್ಯದ ಮಾಂಡಲಿಕ ರಾಜರಿಗೂ ಮುಸಲ್ಮಾನರ ಹಾವಳಿಯನ್ನು ತಡೆಯಬೇಕೆಂದು ಒಳ್ಳೇ ಹಂಬಲ ವಿದ್ದಿತು. ಅದು ಒಬ್ಬಿಬ್ಬರ ಮಾತಾಗಿರಲಿಲ್ಲ. ಅವರೆಲ್ಲರ ಶಕ್ತಿಯು ಏಕಮುಖವಾಗಬೇಕಾಗಿದ್ದಿತು. ವಿದ್ಯಾರಣ್ಯರಿಂದ ಏಕತ್ರಿತವಾದ ಶಕ್ತಿಗೆ ಹರಿಹರನು ಮುಖವಾದನು. ದಕ್ಷಿಣ ಹಿಂದುಸ್ಥಾನವು ತನ್ನಿಂದ ಪಾದಾಕ್ರಾಂತವಾಯಿತೆಂದು ತಿಳಿದ ಮಹಮ್ಮದ ಬಿನ್ ತಘಲಖನು ಆಗ ಇರಾಣ ಚೀನ ದೇಶಗಳ ಮೇಲೆ ದಂಡೆತ್ತಿ ಹೋಗಬೇಕೆಂಬ ಹವಣಿಕೆಯಲ್ಲಿದ್ದನು. ಹರಿಹರನಿಗೆ ಒಳ್ಳೇ ಸಮಯದೊರೆಯಿತು. ಆನೆ ಗುಂದಿಯಲ್ಲಿ ಅಧಿಕಾರ ಸಾಗಿಸುತಿದ್ದ ಮುಸಲ್ಮಾನ ಸರದಾರನನ್ನು ಹೊಡೆದೋಡಿಸಿ ಪಂಪಾಕ್ಷೇತ್ರದಲ್ಲಿ ಪಟ್ಟಾಭಿಷಿಕ್ತನಾದನು. ಆ ಸೀಮೆಗೆ ಪಂಪಾಕ್ಷೇತ್ರವೇ ಹೊಸ ರಾಜಧಾನಿಯಾಯಿತು. ಚಿಕ್ಕ ಪುಟ್ಟ ರಾಜರೆಲ್ಲ ಹರಿಹರನಿಗೆ ತಾವಾಗಿಯೇ ಅಂಕಿತರಾಗಿ ಕಪ್ಪಕಾಣಿಕೆ ಗಳನ್ನು ಸಲ್ಲಿಸ ತೊಡಗಿದರು. ಅವರಾರ ಮೇಲೆಯೂ ಬಲುಮೆ ಮಾಡದೆ ಹರಿಹರನು ರಾಜಾಧಿರಾಜನಾದನು. ಆದರೆ ಹಾಗೆ ಎನಿಸಿ ಕೊಳ್ಳುವುದು ಬೇಕಾಗಿದ್ದಿಲ್ಲ ಅವನಿಗೆ. ಹೊಯ್ಸಳ ಸಮ್ರಾಜನ ಮಾಂಡಲಿಕನಾಗಿದ್ದು ಈಗ ಒಮ್ಮೆಲೆ ಅವನ ಮಾಂಡಲಿಕತನವನ್ನು ಕಿತ್ತೊಗೆದು ತಾನೇ ಸಮ್ರಾಜನೆನಿಸಿಕೊಳ್ಳಲಿಕ್ಕೆ ಅವನ ಮನಸು

ಒಪ್ಪಲಿಲ್ಲವೆಂದು ತೋರುತ್ತದೆ. ಮುಸಲ್ಮಾನರನ್ನು ಎದುರಿಸುವುದರಲ್ಲಿ ಹೊಯ್ಸಳ ಬಲ್ಲಾಳನೂ ಭಾಗ ತೆಗೆದು ಕೊಂಡಿದ್ದನು. ಇದಲ್ಲದೆ ಹೊಯ್ಸಳರಿಗೂ ಈ ಸಂಗಮ ವಂಶೀಯರಿಗೂ ರಕ್ತ ಸಂಬಂಧ ವಿದ್ದಿತು. ಮುಮ್ಮಡಿ ಬಲ್ಲಾಳನ ಮಗನಾದ ವಿರೂಪಾಕ್ಷ ಬಲ್ಲಾಳನು ಹರಿಹರನ ಅಳಿಯನಾಗಿದ್ದನು. ಮುಮ್ಮಡಿ ಬಲ್ಲಾಳನು ತನ್ನ ಮಗ ನಿಗೆ ಯುವರಾಜ ಪಟ್ಟಾಭಿಷೇಕ ಮಾಡಿದುದು ಪಂಪಾಕ್ಷೇತ್ರದಲ್ಲಿಯೇ (೧೩೪೦). ಇದೆಲ್ಲವನ್ನು ಲಕ್ಷ್ಯದಲ್ಲಿ ತಂದು ಹರಿಹರನು ಹೊಯ್ಸಳ ಮನೆತನಕ್ಕಿದ್ದ ಗೌರವವನ್ನು ಕಾಯ್ದು ಮಹಾಮಂಡಲೇಶ್ವರ ನೆಂತಲೇ ಎಂದುಕೊಂಡನೆಂದು ಹೇಳಬೇಕು. ಈ ಹರಿಹರನ ಶಾಸನ ಗಳಲ್ಲಿ ಮಹಾಮಂಡಲೇಶ್ವರನೆಂತಲೇ ಉಕ್ತವಾಗಿದೆ.

ಮುಸಲ್ಮಾನರಿಂದ ಹೊಡೆದೋಡಿಸಲ್ಪಟ್ಟ ಓರಂಗಲ್ಲಿನ ಅರಸು ಮಗನಾದ ಕೃಷ್ಣನು ವಿಜಯನಗರಕ್ಕೆ ಬಂದು ತನ್ನ ರಾಜ್ಯವನ್ನು ಸಂಪಾದಿಸುವಲ್ಲಿ ನೆರವಾಗಬೇಕೆಂದು ಹರಿಹರನಿಗೆ ಕೇಳಿಕೊಂಡನು. ಹಿಂದುಗಳಿಗೆ ಮುಸಲ್ಮಾನರಿಂದಾಗುತ್ತಿರುವ ಹಿಂಸೆಯನ್ನು ದೂರ ಮಾಡುವುದೇ ವ್ರತವಾಗಿ ಉಳ್ಳ ಹರಿಹರನು ಅದನ್ನು ಅಲ್ಲಗಳೆ ಯುವನೆ? ಕೃಷ್ಣನಿಗೆ ನೆರವಾಗಿ ಓರಂಗಲ್ಲಿನ ಮುಸಲ್ಮಾನರನ್ನು ಒಕ್ಕಲಿಕ್ಕಿ ಅವನ ರಾಜ್ಯವನ್ನು ಕೊಡಿಸಿದನು (೧೩೪೪).

ಉತ್ತರಕ್ಕೆ ಮಲಪ್ರಭಾನದಿಯಿಂದ ಸಹ್ಯದ ಮೈಸೂರು ಸಂಸ್ಥಾನವನ್ನೊಳಗೊಂಡ ಪ್ರದೇಶವು ಹರಿಹರನ ಆಳಿಕೆಗೆ ಒಳಗಾಗಿ ದ್ದಿತು. ಇವನಿಗೆ ಕಂಪಣ್ಣ, ಬುಕ್ಕರಾಯ, ಮಾರಪ್ಪ, ಮುದ್ದಪ್ಪ ಎಂಬ ನಾಲ್ವರು ತಮ್ಮಂದಿರೂ ಸೋವಂಣನೆಂಬ ಒಬ್ಬ ಮಗನೂ ಇದ್ದರು. ಅವರೆಲ್ಲರು ಸಾಮ್ರಾಜ್ಯದ ಒಂದೊಂದು ಭಾಗಗಳನ್ನು ಆಳುತಿದ್ದರು. ಮೊದಲನೆಯ ತಮ್ಮನಾದ ಕಂಪಣ್ಣನು ಈಗಿನ

ನೆಲ್ಲೂರು ಕಡಪಾ ಜಿಲ್ಲೆಗಳನ್ನು ಮೂರನೆಯ ತಮ್ಮನಾದ ಮಾರಪ್ಪನು ಶಿವಮೊಗ್ಗ, ಉತ್ತರ ಕನ್ನಡ [ಕಾರವಾರ] ಜಿಲ್ಲೆಗಳನ್ನೂ, ಬುಕ್ಕನ ಮಗನಾದ ಇಮ್ಮಡಿ ಕಂಪಣ್ಣನು ತಮಿಳು ದೇಶವನ್ನೂ ಆಳುತಿದ್ದರು. ಎರಡನೆಯ ತಮ್ಮನಾದ ಬುಕ್ಕರಾಯನು ಮುಖ್ಯ ಸೇನಾಪತಿಯಾಗಿ ಬಲಗೈಯಂತೆ ಅಣ್ಣನನ್ನು ಹೊಂದಿಕೊಂಡಿದ್ದನು. ಅದರಿಂದಲೇ ರಾಮಲಕ್ಷ್ಮಣರ ಜತೆಯಂತೆ ಹಕ್ಕ ಬುಕ್ಕರ ಹೆಸರು ಜತೆಯಾಗಿಯೇ ಇನ್ನೂ ಜನರ ಬಾಯಲ್ಲುಳಿದಿದೆ. ಮುಮ್ಮಡಿ ಬಲ್ಲಾಳನ ಮಗನಾದ ವಿರೂಪಾಕ್ಷ ಬಲ್ಲಾಳನು ಹರಿಹರನ ಅಳಿಯನಾಗಿದ್ದ ಸಂಗತಿ ಈ ಮೊದಲು ಹೇಳಿಯೇ ಇದೆ. ಇವನು ದಂಡನಾಯಕನಾಗಿದ್ದನೆಂದು ತೋರುತ್ತದೆ. ಇವನನ್ನೇ ಅಳಿಯ ಬಲ್ಲಪದಂಣಾಯಕರು ಎಂದು ಶಾಸನಗಳಲ್ಲಿ ಉಲ್ಲೇಖಿಸಿದೆ.

ಓರಂಗಲ್ಲಿನಿಂದ ಮುಸಲ್ಮಾನರನ್ನು ಹೊಡೆದೋಡಿಸಲು ಎಲ್ಲ ಕಡೆಗೂ ಸ್ಥಿರಸ್ಥಾವರವಾಯಿತು. ಆಗ ಹರಿಹರನು ತನ್ನ ತಮ್ಮಂದಿರನ್ನೂ ಅಳಿಯನನ್ನೂ ಶೃಂಗೇರಿಯ ಮಠಕ್ಕೆ ಕರೆದುಕೊಂಡು ಹೋಗಿ ತನ್ನ ಗುರುಗಳ ಗುರುಗಳಾದ ಪೀಠಾಧಿಷ್ಠಿತ ಭಾರತೀ ತೀರ್ಥಸ್ವಾಮಿಗಳಿಗೆ ಭೂದಾನವನ್ನು ಸಮರ್ಪಿಸಿದನು. (೧೩೪೬) ಹಂಪೆಯ ಭವ್ಯವಾದ ವಿರೂಪಾಕ್ಷ ದೇವಾಲಯವು ಈತನ ಕಾಲದಲ್ಲಿಯೇ ಕಟ್ಟಲ್ಪಟ್ಟಿತು.

ಈ ಹರಿಹರನಿಗೆ 'ಅರಿರಾಯ ವಿಭಾಡ' 'ಭಾಷೆಗೆ ತಪ್ಪುವ ರಾಯರ ಗಂಡ' ಎಂಬ ಬಿರುದುಗಳಿದ್ದವು. ವೈರಿಗಳಾದ ಮುಸಲ್ಮಾನರನ್ನೂ ತನಗೆದುರಾಗಿ ನಿಂತ ಹಲಕೆಲವು ಅರಸರನ್ನೂ ಸೋಲಿಸಿದುದರಿಂದ 'ಅರಿರಾಯ ವಿಭಾಡ' ಎಂಬ ಬಿರುದು ಬಂದುದು ಸಹಜ. 'ಭಾಷೆಗೆ ತಪ್ಪುವ ರಾಯರ ಗಂಡ' ಎಂಬ ಬಿರುದನ್ನು ನೋಡಿದರೆ

ಇವನಿಗೆ ಸಹಾಯ ಮಾಡುತ್ತೇವೆಂದು ಭಾಷೆಕೊಟ್ಟ ರಾಜರಲ್ಲಿ ಕೆಲವರು ಅದರಂತೆ ನಡೆಯಲಿಲ್ಲವೆಂದೂ ಅಂತಹರನ್ನು ಈತನು ಮಟ್ಟಿ ಹಾಕಿದನೆಂತಲೂ ಊಹಿಸಬಹುದಾಗಿದೆ. ಸಾಮಾನ್ಯ ಪ್ರಜೆಗಳು ಮಾತ್ರ ಇವನಿಗಾಗಿ ಯಾವಾಗಲೂ ಜೀವ ಕೊಡಲಿಕ್ಕೆ ಸಹ ಸಿದ್ಧರಿರುತಿದ್ದರು. ಹುಣಸೂರು ತಾಲೂಕಿನ ಚಪ್ಪರದ ಹಳ್ಳಿಯ ವೀರಗಲ್ಲುಗಳು ಹರಿಯಪ್ಪ ಒಡೆಯರಿಗಾಗಿ ಕೆಲವರು ಗೌಡರು ಪ್ರಾಣ ಕೊಟ್ಟರೆಂದು ಹೇಳುತ್ತ ಹರಿಹರನ ವಿಷಯದಲ್ಲಿ ಪ್ರಜೆಗಳಿಗಿದ್ದ ಪ್ರೇಮವನ್ನು ಇನ್ನೂ ಜಗತ್ತಿಗೆ ಸಾರುತ್ತಿವೆ.

ಹರಿಹರನು ೧೭ ವರ್ಷಗಳವರೆಗೆ ಪ್ರಜೆಗಳಿಗೆ ಸುಖಶಾಂತಿಗಳು ದೊರೆಯುವಂತೆ ರಾಜ್ಯಭಾರ ಮಾಡಿ ಸಾಮ್ರಾಜ್ಯದ ಬೇರು ಸ್ಥಿರಸ್ಥಾವರವಾಗುವಂತೆ ಮಾಡಿ ೧೩೫೩ ರಲ್ಲಿ ಕಾಲವಶನಾದನು. ಇವನ ವಂಶದವರು ೧೪೩ ವರ್ಷ ( ೧೩೩೬--೧೪೭೮ ) ವಿಜಯನಗರದಲ್ಲಿ ರಾಜ್ಯವಾಳಿದರು. ಇವನ ವಂಶದವರಿಗೆ ಸಂಗಮ ವಂಶದವರೆಂದು ಹೆಸರು ಬಂದಿದೆ. ಹರಿಹರನ ತಂದೆಯ ಹೆಸರೇ ಈ ಮನೆತನಕ್ಕೆ ಬಂದಿತು. ಹಂಪೆಯ ವಿರೂಪಾಕ್ಷನೇ ಈ ಮನೆತನದ ಕುಲದೇವತೆ. ಚಾಲುಕ್ಯ ಸಾಮ್ರಾಜ್ಯದವರಿಟ್ಟುಕೊಂಡ ವರಾಹ ಧ್ವಜವೇ ಇವರ ರಾಜಧ್ವಜ.

# ೫ ಬುಕ್ಕರಾಯ.

ಹರಿಹರನು ಇರುವಾಗಲೇ ಅವನ ಮಗನಾದ ಸೋವಣ್ಣನೂ ಮೊದಲನೆಯ ತಮ್ಮನಾದ ಕಂಪಣ್ಣನೂ ಕಾಲವಶರಾಗಿದ್ದರು. ಅರ್ಥಾತ್ ಹರಿಹರನ ತರುವಾಯ ಬುಕ್ಕರಾಯನೇ ರಾಜ್ಯಕ್ಕೊಡೆಯನಾದನು. ರಾಜ್ಯಸ್ಥಾಪನೆಯ ಕಾರ್ಯದಲ್ಲಿ ಬುಕ್ಕರಾಯನೇ ಅಣ್ಣನಿಗೆ ಬಲಗೈಯಾಗಿ ನಿಂತಿದ್ದನು. ರಾಜನಾದ ಮೇಲಂತೂ ಕೇಳುವುದೇನು? ತನ್ನ ಭುಜಬಲದಿಂದ ಎಲ್ಲರಾಜರ ಮೇಲೆಯೂ ವರ್ಚಸ್ಸು ಕೂಡಿಸಿ ರಾಜಾಧಿರಾಜನಾದನು. ಹೊಯ್ಸಲ ರಾಜನಾದ ಮುಮ್ಮಡಿ ಬಲ್ಲಾಳನೂ ಈ ಮೊದಲು ತೀರಿಹೋಗಿದ್ದನು. ಹರಿಹರನು ಹೊಯ್ಸಲ ಸಾಮ್ರಾಜ್ಯಕ್ಕೆ ಕೊಡಬೇಕಾದ ಗೌರವದ ದೆಶೆಯಿಂದ ಧರಿಸುತಿದ್ದ ಮಹಾಮಂಡಲೇಶ್ವರನೆಂಬ ಬಿರುದು ಇನ್ನುಮುಂದೆ ಧರಿಸುವಕಾರಣವಿರಲಿಲ್ಲ. ಇದೀಗ ವಿಜಯನಗರವು ಎಲ್ಲ ರೀತಿಯಲ್ಲಿಯೂ ಸಾಮ್ರಾಜ್ಯವೆನಿಸಿಕೊಳ್ಳತೊಡಗಿತು.

ಬುಕ್ಕರಾಯನು ಸಾಮ್ರಾಜ್ಯವನ್ನು ಬೆಳಿಸಿದುದಲ್ಲದೆ ತನ್ನ ರಾಜ್ಯದಲ್ಲಿ ಸುಖಶಾಂತಿಗಳು ನೆಲೆಗೊಳ್ಳುವುದಕ್ಕಾಗಿ ಏನೇನು ಮಾಡಬೇಕಾಗಿದ್ದಿತೊ ಅದನ್ನೆಲ್ಲ ಮಾಡಿಸಿದನು. ದೇಶದಲ್ಲಿ ಅಲ್ಲಲ್ಲಿ ಕೆರೆಕಾಲುವೆಗಳನ್ನು ಕಟ್ಟಿಸಿದನು. ಅದೆಲ್ಲಿಯೂ ಕ್ಷೇತ್ರಾರಾಮ, ಗುಡಿಗೋಪುರಗಳು ಕಂಗೊಳಿಸತೊಡಗಿದುವು. ಬುಕ್ಕರಾಜನ ಮಂತ್ರಿಗಳಲ್ಲೊಬ್ಬನಾದ ಬೀಚಿರಾಜನು ಮಳವಳ್ಳಿಯ ಹತ್ತಿರ ಬುಕ್ಕರಾಯಸಮುದ್ರ, ಕೀರ್ತಿಸಮುದ್ರ, ಮಲ್ಲವ್ವೆಯ ಕೆರೆ, ನಾಗವ್ವೆಯ ಕೆರೆ, ಚೌಡಪ್ಪನ ಕಾಲುವೆಗಳನ್ನು ಕಟ್ಟಿಸಿ ಬೀಚಣ್ಣನ ತೋಟ ಕಂಪಣ್ಣನ

ಕೋಟೆಗಳನ್ನು ನಿರ್ಮಿಸಿ ಮಲ್ಲಿಕಾರ್ಜುನ ಸ್ವಾಮಿಯ ಪ್ರತಿಷ್ಠೆ ಮಾಡಿ
ಸಿದನು. ಮಾಧವ ಮಂತ್ರಿಯು ( ವಿದ್ಯಾರಣ್ಯರಲ್ಲ ) ಎನ್ನ ಹೆಸರಿನ
ದೊಂದು ಕಾಲುವೆಯನ್ನು ತಲಕಾಡಿನ ಬಳಿ ತೆಗೆಸಿದನು. ಈ ಪ್ರಕಾರ
ರಾಜನಾಜ್ಞೆಯ ಮೇರೆಗೆ ರಾಜಪ್ರತಿನಿಧಿಗಳಿಂದ ಎಲ್ಲ ಕಡೆಗೂ ಕೆರೆ
ಕಾಲುವೆಗಳು ಕಟ್ಟಿಸಲ್ಪಟ್ಟುವು. ಇದರಿಂದ ಸ್ವಾಭಾವಿಕವಾಗಿಯೇ
ಪ್ರಜೆಗಳ ಸುಖಸಂಪತ್ತು ಹೆಚ್ಚಿದುವು. ಪ್ರಜೆಗಳೆಲ್ಲರೂ ಬುಕ್ಕರಾಯ
ನೆಂದರೆ ಸಾಕ್ಷಾತ್ ಪರಮಾತ್ಮನ ಅವತಾರವೆಂದೇ ತಿಳಿಯತೊಡ
ಗಿದರು. ಪ್ರಜೆಗಳ ಸುಖಶಾಂತಿಗಳೇ ತಮ್ಮ ಸುಖಶಾಂತಿಗಳೆಂದು ತಿಳಿ
ಯುವ ರಾಜನೂ ರಾಜಪ್ರತಿನಿಧಿಗಳೂ ಇರುವಾಗ ರಾಜನು ಪರ
ಮಾತ್ಮ ಸ್ವರೂಪನೆಂದು ತಿಳಿಯುವುದರಲ್ಲಿ ತಪ್ಪೇನು? ರಾಜಸತ್ತಾ
ತ್ಮಕವಾಗಿದ್ದರೂ ಇಂತಹ ಸುರಾಜ್ಯವು ಸ್ವರಾಜ್ಯ. ರಾಜನೂ ರಾಜ
ಪ್ರತಿನಿಧಿಗಳೂ ಆದಾವಾಗ ತಮ್ಮ ಸತ್ತೆಯ ದುರುಪಯೋಗ ಮಾಡಿ
ಕೊಂಡು ಪ್ರಜೆಗಳನ್ನು ಹಿಂಡಿ ಹಿಪ್ಪೆಮಾಡಲು ಯತ್ನಿಸುವರೊ ಆಗ
ರಾಜ್ಯಕ್ರಾಂತಿಯ ಕಾಲವು ಸಮೀಪಿಸಿತೆಂದು ತಿಳಿಯ ತಕ್ಕುದೆ!

ಬುಕ್ಕರಾಯನಿಗೆ ಇಮ್ಮಡಿ ಹರಿಹರ, ಇಮ್ಮಡಿ ಕಂಪ, ಸಂಗಮ
ವಿರೂಪಾಕ್ಷ, ಭಾಸ್ಕರ, ಮಲ್ಲಿನಾಥ ಎಂಬ ಮಕ್ಕಳಿದ್ದರು. ಇವ
ರೆಲ್ಲರು ಮಾಂಡಲಿಕರಾಗಿ ಸಾಮ್ರಾಜ್ಯದ ಒಂದೊಂದು ಭಾಗವನ್ನು
ಆಳುತಿದ್ದರು. ಇಮ್ಮಡಿ ಕಂಪನು ಕೋಲಾರ ಜಿಲ್ಲೆಯೊಳಗಿನ ಮುಳ
ಬಾಗಿಲಿನಲ್ಲಿ ಆಳುತಿದ್ದನು. ವಿರೂಪಾಕ್ಷನು ಪೆನುಗೊಂಡೆಗೂ ಮಲ್ಲಿ
ನಾಥನು ಚಿತ್ರದುರ್ಗದ ಸೀಮೆಗೂ ಒಡೆಯರಾಗಿದ್ದರು. ಇಮ್ಮಡಿ
ಹರಿಹರನು ಯುವರಾಜನಾಗಿ ವಿಜಯನಗರದಲ್ಲಿಯೇ ಇದ್ದಂತೆ
ತೋರುತ್ತದೆ. ಸ್ವತಃ ಅರಸುಮಕ್ಕಳೇ ಸಾಮ್ರಾಜ್ಯದ ಭಾಗಗಳಲ್ಲಿ
ಆಳುತಿದ್ದು ಪ್ರಜೆಗಳ ಅನುವಾಪತ್ತುಗಳನ್ನು ತಿಳಿದುಕೊಂಡು ಅವು

ಗಳನ್ನು ದೂರಮಾಡಲು ಯತ್ನಿಸುತ್ತಿದ್ದುದರಿಂದ ಪ್ರಜೆಗಳಲ್ಲಿ ಸ್ವಾಭಾವಿಕವಾಗಿಯೇ ಆ ಸಾಮ್ರಾಜ್ಯದ ವಿಷಯದಲ್ಲಿ ಆದರವು ಉತ್ಪನ್ನವಾಗುತಿದ್ದಿತು. ಇದಲ್ಲದೆ ಮಲೆತು ನಿಂತ ರಾಜರನ್ನೂ ಮಾಂಡಲಿಕರನ್ನೂ ಹಣ್ಣಿಗೆ ತರುವಲ್ಲಿಯೂ ವಿಶೇಷ ಅನುಕೂಲವಾಗುತಿದ್ದಿತು. ಈ ರಾಜಗುವರರು ತಮಗಲ್ಲದವರಾರೆಂಬುದನ್ನು ತಿಳಿಸಿಕೊಂಡು ಆದಾಗಲೆ ಅವರನ್ನು ಮಟ್ಟುಹಾಕುತಿದ್ದರು. ಹೀಗೆ ಮಲೆತು ನಿಂತ ತೊಂಡಮಂಡಲದ ಅರಸನಾದ ಚಂಪರಾಯನ ಮೇಲೆ ಕಂಪಣ್ಣನು ದಂಡೆತ್ತಿ ಹೋಗಿ ದ್ವಂದ್ವಯುದ್ಧದಲ್ಲಿ ಅವನನ್ನು ಹಣಿದು ಹಾಗೆಯೆ ಮುಂದಕ್ಕೆ ಮಧುರೆಯ ಸುಲ್ತಾನನ ಮೇಲೆ ಸಾಗಿಹೋಗಿ ಅವನನ್ನು ಸಂಹರಿಸಿದ ಸಂಗತಿಯು ಆ ಕಂಪರಾಯನ ಹೆಂಡತಿಯಾದ ಗಂಗಾದೇವಿಯು ಬರೆದ "ವೀರ ಕಂಪಣರಾಯ ಚರಿತಂ" ಎಂಬ ಸಂಸ್ಕೃತ ಕಾವ್ಯದಲ್ಲಿ ಸೊಗಸಾಗಿ ವರ್ಣಿಸಲ್ಪಟ್ಟಿದೆ.

ಈ ಬುಕ್ಕರಾಯನಿಗೆ ರಾಜಾಧಿರಾಜ, ರಾಜಪರಮೇಶ್ವರ, ಪರರಾಯ ಭಯಂಕರ, ಹಿಂದೂರಾಯಸುರತ್ರಾಣ ಎಂಬ ಬಿರುದುಗಳಿದ್ದುವು. ವಿಜಯನಗರವು ಅದಾವಾಗ ಸಾಮ್ರಾಜ್ಯವಾಯಿತೊ ಆಗ ಅಲ್ಲಿಯ ರಾಜರಿಗೆ ರಾಜಾಧಿರಾಜ, ರಾಜಪರಮೇಶ್ವರ ಎಂಬ ಬಿರುದುಗಳು ಬರುವುದು ಸ್ವಾಭಾವಿಕವೇ ಇದೆ. ಪರರಾಯ ಭಯಂಕರನೆಂಬ ಬಿರುದು ಉಳಿದ ರಾಯರಮೇಲೆ ಬುಕ್ಕರಾಯನ ವರ್ಚಸ್ಸು ಎಷ್ಟಿದ್ದಿತೆಂಬುದನ್ನು ತೋರಿಸುತ್ತದೆ. ಹಿಂದೂಧರ್ಮದ ರಕ್ಷಣೆಗಾಗಿಯೇ ಸಾಮ್ರಾಜ್ಯವನ್ನು ಸ್ಥಾಪಿಸಿ ಅದರಲ್ಲಿಯೆ ತನ್ನ ಆಯುಷ್ಯವನ್ನೆಲ್ಲ ಕಳೆದು ಹಿಂದೂರಾಯರಿಗೆ ಆಶ್ರಯನಾಗಿದ್ದವನು "ಹಿಂದೂರಾಯ ಸುರತ್ರಾಣ" (ಹಿಂದೂರಾಜರೆಂಬ ದೇವತೆಗಳಿಗೆ ಇಂದ್ರನೋಪಾದಿಯುಲ್ಲಿದ್ದವ) ನಲ್ಲದೆ ಮತ್ತೇನು !

ಬುಕ್ಕರಾಯನಿಗೂ ವಿದ್ಯಾರಣ್ಯರೇ ರಾಜಗುರುಗಳು. ಅವರೀಗ ಕೃತಕೃತ್ಯರು. ಧರ್ಮರಕ್ಷಣೆಗಾಗಿ ಬೇಕಾದ ಸಾಮ್ರಾಜ್ಯವನ್ನು ಸ್ಥಾಪಿಸಿ ಯಾಗಿತ್ತು. ಬುಕ್ಕರಾಯನಂಥ ಮಹಾರಾಯನು ಅವರ ಮುಂದೀಗ ನಡುಕಟ್ಟಿ ನಿಂತಿರುವನು ಹೇಳಿದ ಕೆಲಸ ಮಾಡಲಿಕ್ಕೆ. ಮಳಲೆಣ್ಣೆಯೂ ಸಿಂಗದಕೊಡೂ ಬೇಕೆಂದರೆ 'ಹೂಂ' ಎಂದು ಆದಾಗಲೆ ತಂದು ಕೊಡುವ ಬಂಟನವ. ವಿದ್ಯಾರಣ್ಯರಿಗೀಗ ಬೇಕಾದುದು ಧರ್ಮಜ್ಞಾನ ಗಳ ಪ್ರಚಾರ. ಬುಕ್ಕರಾಯನಿಗೆ ತಕ್ಕ ಸಲಹೆಯನ್ನು ಕೊಡುತ್ತ ತಾವೂ ತಮ್ಮ ತಮ್ಮಂದಿರಾದ ಸಾಯಣಾಚಾರ್ಯರೂ ಕೂಡಿ ಹಲವು ಧಾರ್ಮಿಕ ವ್ಯಾವಹಾರಿಕ ಗ್ರಂಥಗಳನ್ನು ಬರೆದರು. ವೇದ, ಬ್ರಾಹ್ಮಣ, ಉಪನಿಷತ್ತುಗಳಿಗೆ ಭಾಷ್ಯಗಳನ್ನು ರಚಿಸಿದರು. ದಿಗ್ದೇಶಗಳಿಂದ ಪಂಡಿತರನ್ನು ಕರೆಸಿ ಅವರಿಂದಲೂ ಅನೇಕಾನೇಕ ಗ್ರಂಥಗಳನ್ನು ಬರೆಸಿದರು. ರಾಜಧಾನಿಯು ವಿದ್ಯಾನಗರವಾಯಿತು. ಬುಕ್ಕರಾಯನೂ ಆ ಪಂಡಿತರನ್ನೆಲ್ಲ ಸಮ್ಮಾನಿಸಿದನು. ವಿದ್ಯಾರಣ್ಯರ ಗುರುಗಳಾದ ಭಾರತೀತೀರ್ಥರಲ್ಲಿಯೂ ಗುರುಭಕ್ತಿಯನ್ನಿಟ್ಟು ಶೃಂಗೇರಿಯ ಪೀಠಕ್ಕೆ ಅನೇಕ ದತ್ತಿಗಳನ್ನು ಬಿಟ್ಟುಕೊಟ್ಟನು. ವಿದ್ಯಾರಣ್ಯರನ್ನು ಬಿಟ್ಟು ಅರಗಳಿಗೆಯಿರಬೇಕಾದರೂ ಜೀವದ ಮೇಲೆ ಬಂದಂತಾಗುತಿತ್ತು ಆ ಮಹಾರಾಯನಿಗೆ. ಕಾಶಿಗೆಂದು ಹೊರಟ ವಿದ್ಯಾರಣ್ಯರನ್ನು ಬಹು ದಿವಸ ಹೋಗಗೊಡಲಿಲ್ಲ. ಬೇಗ ಬರಬೇಕೆಂದು ತಾನು ಹೇಳಿಕಳುಹಿ ಸಿದರೆ "ಇನ್ನೇನು ನನ್ನ ಕೆಲಸ ? ನಾನೀಗ ವಿಶ್ವಕುಟುಂಬಿ; ತೀರ್ಥ ಕ್ಷೇತ್ರಗಳನ್ನು ತಿರುಗುತ್ತ ಜನತೆಯನ್ನು ಸುಸಂಸ್ಕೃತರನ್ನಾಗಿ ಮಾಡು ವುದೇ ನನ್ನ ಈಗಿನ ಕಾರ್ಯ" ಎಂದು ಹೇಳಿ ಅದೆಲ್ಲಿ ಅಲ್ಲಗಳೆಯು ವರೂ ಎಂದು ವಿದ್ಯಾರಣ್ಯರ ಗುರುಗಳಾದ ಭಾರತೀತೀರ್ಥರಿಂದಲೆ ಅವರಿಗೆ ಕಾಗದ ಬರೆಯಿಸಿ ಕರೆಯಿಸಿಕೊಂಡ. ಇದೆಂತಹ ಗುರು

ಭಕ್ತಿ ! ಇದಲ್ಲವೆ ನಿಜವಾದ ಗುರುಶಿಷ್ಯರ ಜತೆ !

ದಿಲ್ಲಿಯ ಮಹಮ್ಮದ ಬಿನ್ ತಘಲಖನ ತರುವಾಯ ಅವನು ಗೆದ್ದ ದಕ್ಷಿಣದ ಪ್ರದೇಶದಲ್ಲಿ ಓರಂಗಲ್ಲು ಮೊದಲಾದುವನ್ನು ಹರಿಹರ ರಾಯನ ಸಹಾಯದಿಂದ ಅಲ್ಲಿಯ ಅರಸು ಮನೆತನದವರು ತಿರುಗಿ ಸಂಪಾದಿಸಿದ ಸಂಗತಿ ಈ ಮೊದಲು ಹೇಳಿಯೇ ಇದೆ. ಉಳಿದ ಪ್ರದೇಶವೆಲ್ಲ ಆ ಮಹಮ್ಮದ ಬಿನ್ ತಘಲಖನ ಸುಭೇದಾರ ನೊಬ್ಬನ ಕೈಕೆಳಗಿತ್ತು. ಆ ಸುಭೇದಾರನನ್ನೂ ಅವನ ಸೈನ್ಯವನ್ನೂ ಹೊಡೆದೋಡಿಸಿ ಜಾಫರಖಾನನೆಂಬ ಮುಸಲ್ಮಾನ ಸರದಾರನೊಬ್ಬನು ಕಲಬುರ್ಗಿಯಲ್ಲಿ ಹೊಸದೊಂದು ರಾಜ್ಯವನ್ನು ಸ್ಥಾಪಿಸಿದನು.(೧೩೪೭) ಅವನೂ ತನ್ನ ರಾಜ್ಯದಲ್ಲಿ ಸುಖಶಾಂತಿಗಳು ನೆಲೆಗೊಳ್ಳುವಂತೆ ಮಾಡಿ ದನು. ಉತ್ತರದ ಮುಸಲ್ಮಾನರ ದಾಳಿಗಳೂ ಕೊಲೆಸುಲಿಗೆಗಳೂ ದಕ್ಷಿಣದವರಿಗೆ ಈಗ ತಪ್ಪಿದಂತಾಯಿತು. ಕೃಷ್ಣೆಯ ಉತ್ತರದಲ್ಲಿ ಈ ಜಾಫರಖಾನನ ಪ್ರಸ್ಥವು ಚೆನ್ನಾಗಿಯೇ ಕೂತಿತು. ಅದೂ ಒಂದು ಪ್ರಬಲ ರಾಜ್ಯವಾಯಿತು. ದಕ್ಷಿಣ ಹಿಂದೂದೇಶದಲ್ಲಿ ಬಾಮನೀ ರಾಜ್ಯ ವೊಂದು, ವಿಜಯನಗರ ರಾಜ್ಯವೊಂದು; ಹೀಗೆ ಎರಡು ರಾಜ್ಯಗಳಾ ದುವು. ಇದರಿಂದ ಸ್ವಾಭಾವಿಕವಾಗಿಯೇ ಬಾಮನೀ ರಾಜ್ಯದ ಸುಲ್ತಾ ನರು ವಿಜಯನಗರದ ರಾಜರನ್ನು ವಕ್ರದೃಷ್ಟಿಯಿಂದ ನೋಡತೊಡ ಗಿದರು. ಅದರಂತೆ ವಿಜಯನಗರದ ರಾಜರೂ ಬಾಮನೀ ಸುಲ್ತಾನ ರನ್ನು ನೋಡತೊಡಗಿದರು. ಜಾಫರಖಾನನು ಇರುವವರೆಗೆ ಈ ಎರಡು ರಾಜ್ಯಗಳಲ್ಲಿ ವಿತುಷ್ಟತೆ ಉಂಟಾಗಿರಲಿಲ್ಲ. ಅದೂ ಹೊಸ ರಾಜ್ಯ ಇದೂ ಹೊಸರಾಜ್ಯ. ಇಬ್ಬರೂ ತಮ್ಮ ಅಧಿಕಾರವನ್ನು ಪ್ರಸ್ಥಾಪಿಸಿ ರಾಜ್ಯದಲ್ಲಿ ಸುಖಶಾಂತಿಗಳನ್ನು ನೆಲೆಗೊಳಿಸುವುದ ರಲ್ಲಿದ್ದರು. ಆದರೆ ಜಾಫರಖಾನನ ತರುವಾಯ ಪಟ್ಟವೇರಿದ ಮಹಮ್ಮದ

ಶಹನ ಕಾಲದಲ್ಲಿ ವಿತುಷ್ಟತೆಗೆ ಪ್ರಾರಂಭವಾಯಿತು. ಕೃಷ್ಣಾತುಂಗ ಭದ್ರಾ ನದಿಗಳ ನಡುವಿನ ಈಗಿನ ಉತ್ತರಕರ್ಣಾಟಕ ಸೀಮೆಯೇ ಆ ವಿತುಷ್ಟತೆಗೆ ಕಾರಣ. ಇಬ್ಬರ ನಡುವೆಯೂ ಅನೇಕ ಸಲ ಯುದ್ಧ ಗಳಾದುವು. ಯುದ್ಧಗಳಾಗಲು ಮುಂದೆ ಮಾಡುವ ನೆವಗಳೇನೊ ಕ್ಷುಲ್ಲಕವಾದುವುಗಳು. ಮುಖ್ಯ ಕಾರಣವು ಆ ನಡು ಸೀಮೆಯ ಮೇಲೆ ಅಧಿಕಾರ ಪ್ರಸ್ಥಾಪಿತ ಮಾಡುವುದು. ಇಬ್ಬರೂ ವೀರರು. ಸಮ ದಂಡಿಯಲ್ಲಿ ಕಾದಿದರು. ಆದರೆ ಜಯಲಕ್ಷ್ಮಿಯು ಇಬ್ಬರಲ್ಲಿ ಯಾರಿಗೂ ನಿಶ್ಚಿತವಾಗಿ ಮಾಲೆಹಾಕಿದಂತೆ ತೋರುವುದಿಲ್ಲ. ಒಮ್ಮೆ ಆ ಕಡೆಗೆ ಒಮ್ಮೆ ಈ ಕಡೆಗೆ ಕೈಮಾಡಿ ನಡುವೆಯೇ ನಿಂತು ಬಿಟ್ಟಿರ ಬೇಕು. ಈ ಸೀಮೆಯ ಸಲುವಾಗಿ ನಡೆದ ಕದನವು ವರ್ಷ ಎರಡು ವರ್ಷಗಳಲ್ಲ ಒಂದೆರಡು ತಲೆವಾರಲ್ಲ. ಆವೆರಡು ರಾಜ್ಯಗಳು ಅಸ್ತಿತ್ವ ದಲ್ಲಿರುವವರೆಗೂ ತಲೆವಾರಿನಿಂದ ತಲೆಮಾರಿಗೆ ಸಾಗಿ ಬಂದಿತು. ಆ ರಾಜ್ಯಗಳ ಸಂಗಡಲೇ ಅದರ ಅಂತವಾಯಿತು.

ಬುಕ್ಕರಾಯನು ೨೪ ವರ್ಷ ರಾಜ್ಯವಾಳಿ ಸುಖಶಾಂತಿಗಳನ್ನು ನೆಲಗೊಳಿಸಿ ರಾಜ್ಯದ ಸಂಪತ್ತನ್ನು ವರ್ಧಿಸಿ ೧೩೭೬ ರಲ್ಲಿ ಕಾಲ ವಾದನು. ಅವನ ತರುವಾಯ ಅವನ ಮಗ ಇಮ್ಮಡಿ ಹರಿಹರನು ಸಾಮ್ರಾಜ್ಯದ ಭಾರವನ್ನು ಕೈಕೊಂಡನು.



## ೭ ಸಾಮ್ರಾಜ್ಯದ ಬೆಳವಣಿಗೆ.

ಇಮ್ಮಡಿ ಹರಿಹರನ ಕಾಲದಲ್ಲಿ ವಿಜಯನಗರದ ಸಾಮ್ರಾಜ್ಯವು ಮತ್ತಷ್ಟು ವಿಸ್ತಾರ ಹೊಂದಿತು. ಇವನು ದಕ್ಷಿಣದ ಎಲ್ಲ ಅರಸರನ್ನು ತನ್ನ ಅಂಕಿತದಲ್ಲಿ ತಂದು ಗೋವೆಯ ಸುಲ್ತಾನನನ್ನು ಹೊಡೆದೋಡಿಸಿ ಹಿಂದೀ ಮಹಾಸಾಗರದವರೆಗೂ ತನ್ನ ಅಧಿಕಾರವನ್ನು ನಡಿಸತೊಡಗಿದನು. ಉತ್ತರವನ್ನುಳಿದು ಮೂರು ದಿಕ್ಕುಗಳಲ್ಲಿ ಸಮುದ್ರವೇ ವಿಜಯನಗರ ಸಾಮ್ರಾಜ್ಯದ ಮೇರೆಯಾಯಿತು. ಅದಕಾಗಿಯೇ ಈ ರಾಯನಿಗೆ ಪೂರ್ವ ದಕ್ಷಿಣ ಪಶ್ಚಿಮ ಸಮುದ್ರಾಧೀಶ್ವರನೆಂಬ ಬಿರುದಾಯಿತು. ಮಹಾರಾಜಾಧಿರಾಜನಾದನೀತ. ಈತನ ಕಾಲದಲ್ಲಿಯೂ ಕೆಲದಿವಸ ವಿದ್ಯಾರಣ್ಯರೇ ರಾಜಗುರುಗಳಾಗಿದ್ದರು. ಆದರೆ ಅವರು ಬೇಗನೆ ಶೃಂಗೇರಿಯ ಪೀಠಾಧಿಷ್ಠಿತರಾದುದರಿಂದ ಅವರ ತಮ್ಮಂದಿರಾದ ಸಾಯಣಾಚಾರ್ಯರು ರಾಜಗುರುಗಳಾಗಿಯೂ ಮುಖ್ಯ ಮಂತ್ರಿಗಳಾಗಿಯೂ ಕೆಲಸ ಮಾಡಿದರು. ವಿದ್ಯಾರಣ್ಯರು ಶಕ ವರ್ಷ ೧೩೦೮ ರಲ್ಲಿ (೧೩೮೬) ದೇಹವಿಡಲು ಆ ಮಹರ್ಷಿಯರ ಸ್ಮರಣೆಗೆಂದು ರಾಯನು ವಿದ್ಯಾರಣ್ಯಪುರವನ್ನು ಕಟ್ಟಿಸಿ ಆ ಊರ ನೂರು ಹೊಲಗಳನ್ನು ಶೃಂಗೇರಿಯ ಬ್ರಾಹ್ಮಣರಿಗೆ ದಾನ ಮಾಡಿದನು.

ಈ ಹರಿಹರನಿಗೆ ಪಂಪಾದೇವಿಯಲ್ಲಿ ಬುಕ್ಕರಾಯನೂ ಮಲ್ಲಾದೇವಿಯಲ್ಲಿ ದೇವರಾಯನೂ ಜನಿಸಿದರು. ಅಲ್ಲದೆ ಬೇರೆ ರಾಣಿಯರಲ್ಲಿ ಚಿಕ್ಕರಾಯ ವಿರೂಪಣ್ಣ ಎಂಬಿಬ್ಬರು ಜನಿಸಿದರು. ಇವನು ೧೩೭೭ ರಿಂದ ೧೪೦೪ ರವರೆಗೆ ೨೭ ವರ್ಷ ರಾಜ್ಯವಾಳಿ ಅನೇಕ ಗುಡಿಗುಂಡಾರ

ಗಳನ್ನು ಕಟ್ಟಿಸಿ ಅವುಗಳಿಗೂ ಮೊದಲಿನ ಹಲ ಕೆಲವು ದೇವಾಲಯ ಗಳಿಗೂ ದತ್ತಿಗಳನ್ನು ಬಿಟ್ಟು ೧೪೦೪ ರಲ್ಲಿ ಮರಣ ಹೊಂದಿದನು. ಇವನ ಕಾಲದಲ್ಲಿ ಮುದ್ದನೆಂಬ ವೀರಶೈವನೂ ಇರುಗನೆಂಬ ಜೈನ ಧರ್ಮೀಯನೂ ಸೇನಾಪತಿಗಳಾಗಿದ್ದರೆಂದು ಶಾಸನಗಳಿಂದ ತಿಳಿದು ಬರು ತ್ತದೆ. ಗುಂಡನೆಂಬವನೊಬ್ಬನೂ ಸೇನಾಪತಿಯಾಗಿದ್ದನೆಂದು ಶಾಸನ ಗಳಲ್ಲಿ ಉಲ್ಲೇಖವಿದೆ.

ಹರಿಹರದೇವನ ತರುವಾಯ ಅವನ ಮಗನಾದ ಬುಕ್ಕರಾಯನು ೧೪೦೪ ರಲ್ಲಿ ಪಟ್ಟವೇರಿ ಎರಡು ವರ್ಷಗಳವರೆಗೆ ರಾಜ್ಯಭಾರ ನಡಿಸಿ ಕಾಲವಶನಾಗಲು ಅವನ ತಮ್ಮನಾದ ಪ್ರತಾಪದೇವರಾಯನು ಸಿಂಹಾ ಸನಕ್ಕಧಿಕಾರಿಯಾದನು [ ೧೪೦೬ ]. ಇವನು ಪಟ್ಟಕ್ಕೆ ಬಂದಕೂಡಲೆ ವಿಜಯನಗರದ ಕೋಟೆಯ ಗೋಡೆಗಳನ್ನು ಕಟ್ಟಿಸಿ ಪಟ್ಟಣವನ್ನು ಭದ್ರಪಡಿಸಿದನು. ತುಂಗಭದ್ರೆಗೆ ಒಡ್ಡು ಹಾಕಿ ೧೫ ಮೈಲುಗಳ ವರೆಗೆ ಕಾಲುವೆ ಒಯ್ದನು. ಇದರಿಂದ ಪಟ್ಟಣದಲ್ಲೆಲ್ಲ ನೀರಿನ ಅನುಕೂಲತೆ ಯಾಯಿತು. ಇವನ ಕಾಲದಲ್ಲಿ ವಿದ್ಯಾರಣ್ಯರ ತಂಗಿಯ ಮಗನಾದ ಲಕ್ಷ್ಮೀಧರನೆಂಬವನು ಮಂತ್ರಿಯಾಗಿದ್ದನು. ಎಂದರೆ ವಿಜಯನಗರ ಸಾಮ್ರಾಜ್ಯವು ಸ್ಥಾಪನವಾದಂದಿನಿಂದ ಆಂ ವರ್ಷಗಳವರೆಗೆ ಮಂತ್ರಿ ಪದವು ವಿದ್ಯಾರಣ್ಯರ ವಂಶದವರಿಗೆಯೇ ಸಾಗಿ ಬಂದಿತು. ಈ ಪ್ರತಾಪದೇವರಾಯನು ಹತ್ತುವರ್ಷ ರಾಜ್ಯಭಾರ ಮಾಡಿ ಕಾಲವಾದ ಮೇಲೆ ಅವನ ಮಗನಾದ ವಿಜಯನು ಒಂದೆರಡು ವರ್ಷ ಪಟ್ಟಕ್ಕೆ ಅಧಿಕಾರಿಯಾಗಿದ್ದನು. ಈ ವಿಜಯನ ತರುವಾಯ ಅವನ ಮಗನಾದ ಇಮ್ಮಡಿ ದೇವರಾಯನು ೧೪೧೯ ರಲ್ಲಿ ಸಿಂಹಾಸನವನ್ನೇರಿದನು.

ಸಂಗಮ ಮನೆತನದಲ್ಲಿ ಒಳ್ಳೇ ವೈಭವದ ಆಳಿಕೆಯೆಂದರೆ ಈ ಇಮ್ಮಡಿ ದೇವರಾಯನದು. ಪ್ರೌಢ ಪ್ರತಾಪದೇವರಾಯ, ಗಜಬೇಂಟೆ

ಕಾರಣನೆಂದೂ ಪ್ರಸಿದ್ಧನಾಗಿರುವನಷ್ಟೇ. ಬಾಮನೀ ರಾಜ್ಯಕ್ಕೂ ವಿಜಯ
ನಗರ ರಾಜ್ಯಕ್ಕೂ ತಲೆಮಾರಿನಿಂದ ತಲೆಮಾರಿಗೆ ಜಗಳವು ನಡೆದು
ಬಂದಿದ್ದಿತೆಂದು ಈ ಮೊದಲು ಹೇಳಿದೆಯಷ್ಟೆ. ಸಾಮ್ರಾಜ್ಯವಿಸ್ತಾ
ರದ ಮೇಲಿಂದಲೂ ಯುದ್ಧಸಾಮಗ್ರಿಯ ಮೇಲಿಂದಲೂ ಇನ್ನು
ಳಿದ ಅನುಕೂಲತೆಯ ಮೇಲಿಂದಲೂ ನೋಡಿದರೆ ವಿಜಯನಗರ
ದವರು ಬಾಮನೀರಾಜ್ಯವನ್ನು ಆದಾಗಲೆ ಹಣ್ಣಿಗೆ ತರಬಹು
ದಾಗಿದ್ದಿತು. ಹಾಗಾಗಲಿಲ್ಲ ವಿಜಯನಗರದವರು ಬಾಮನೀ
ರಾಜ್ಯದ ಕೂಡ ಮಾಡಿದ ಯುದ್ಧಗಳಲ್ಲಿ ತಾತ್ಕಾಲಿಕ ಯಶವು
ಕೆಲವು ಸಾರೆ ದೊರೆತಿದ್ದರೂ ಪೂರ್ಣಯಶವು ದೊರೆತಿರಲಿಲ್ಲ.
ಕೃಷ್ಣಾ ತುಂಗಭದ್ರಾ ನದಿಗಳ ನಡುವಿನ ಸೀಮೆಯ ಬಡಿದಾಟ
ವೇನು ಮುಗ್ಗಲಿಲ್ಲ. ಅದರಲ್ಲಿಯೂ ರಾಯಚೂರು ಮುದಗಲ್ಲು
ಕೋಟೆಗಳ ಬಗ್ಗೆ ಮೇಲಿಂದ ಮೇಲೆ ಬಡಿದಾಟಗಳಾಗುತ್ತಿದ್ದುವು.
ಅದೊಮ್ಮೆ ಆ ಕೋಟೆಗಳು ಬಾಮನೀಯವರಾಧೀನವಾಗಿದ್ದರೆ
ಮತ್ತೊಮ್ಮೆ ವಿಜಯನಗರದವರಾಧೀನವಾಗುತ್ತಿದ್ದುವು. ಈ ಕ್ರಮವು
ನಡೆದೇ ಇತ್ತು. ಪ್ರತಾಪಿಯಾದ ಪ್ರೌಢದೇವರಾಯನು ಸೇನಾಬಲ
ದಲ್ಲಿ ವಿಜಯನಗರದವರ ಕೈ ಮೇಲಿದ್ದರೂ ಪೂರ್ಣಯಶ ಪ್ರಾಪ್ತಿ
ಯಾಗದಿರುವುದಕ್ಕೆ ಕಾರಣಗಳನ್ನು ಶೋಧಿಸ ತೊಡಗಿದನು
ಸಾಮ್ರಾಜ್ಯದಲ್ಲಿರುವ ರಾಜಕಾರಣಪಟುಗಳೊಡನೆ ಆಲೋಚಿಸಿ ತನ್ನ
ಸೈನ್ಯದ ಸುಧಾರಣೆಯ ಕೆಲಸವನ್ನು ಕೈಕೊಂಡನು. ಅದಕಾಗಿ ಕೆಲ
ವರು ಮುಸಲ್ಮಾನ ಸೈನಿಕರನ್ನಿಟ್ಟುಕೊಂಡು ಅವರಿಗೆ ಬೇಕಾದ
ಅನುಕೂಲತೆಗಳನ್ನು ಕಲ್ಪಿಸಿಕೊಟ್ಟನು. ಬಾಮನೀ ಸುಲ್ತಾನರಿಗೆ ತನ್ನ
ಪ್ರತಾಪವನ್ನು ತೋರಿಸಿದನು. ಆದಾಗ ವಿಜಾಪುರ ಪ್ರಾಂತವು
ವಿಜಯನಗರ ಸಾಮ್ರಾಜ್ಯಕ್ಕಾಧೀನವಾಯಿತು.

ಈ ಪ್ರೌಢ ಪ್ರತಾಪದೇವರಾಯನ ಆಳಿಕೆಯಲ್ಲಿ ವೀರಶೈವ ಮತಕ್ಕೂ ಕನ್ನಡ ವಾಙ್ಮಯಕ್ಕೂ ವಿಶೇಷ ಕಳೆಯೇರಿತು. ವೀರಶೈವ ನಾದ ಲಕ್ಕಣ್ಣದಂಡೇಶನು ಈತನ ಮಹಾಪ್ರಧಾನ; ಜಕ್ಕಣಾ ರ್ಯನು ದಂಡನಾಯಕ. ವಿಜಯನಗರದಲ್ಲಿ ಪ್ರಸಿದ್ಧಿವಡೆದ ೧೦೧ ಜನ ವೀರಶೈವ ವಿರಕ್ತರು ಇದ್ದುದು ಇವನ ಕಾಲದಲ್ಲಿಯೇ. ಇವರಲ್ಲಿ ಹಲ ವರು ಕನ್ನಡದಲ್ಲಿಯೂ ಸಂಸ್ಕೃತದಲ್ಲಿಯೂ ಕಾವ್ಯಗಳನ್ನು ಬರೆದಿರು ವರು. ಮಹಾಪ್ರಧಾನನಾದ ಲಕ್ಕಣ್ಣದಂಡೇಶನು 'ಶಿವತತ್ತ್ವ ಚಿಂತಾಮಣಿ' ಎಂಬ ಗ್ರಂಥವನ್ನೂ ದಂಡನಾಯಕ ಜಕ್ಕಣಾರ್ಯನ' ನೂರೊಂದುಸ್ಥಲ ಎಂಬ ಗ್ರಂಥವನ್ನೂ ಬರೆದಿರುವರು. ಇವೆರಡೂ ವೀರ ಶೈವ ಮತವಿಷಯಕ ಗ್ರಂಥಗಳು. ೧೦೧ ವೀರಶೈವ ವಿರಕ್ತರಲ್ಲಿ ಒಬ್ಬನಾದ ಚಾಮರಸನು ಪ್ರಭುಲಿಂಗಲೀಲೆಯನ್ನು ಬರೆದಿರುವನು. ಕುಮಾರ ವ್ಯಾಸನು ಮಹಾಭಾರತವನ್ನು ಬರೆದುದು ಇವನ ಕಾಲ ದಲ್ಲಿಯೇ. ಇವೆರಡೂ ಗ್ರಂಥಗಳು ರಾಜನಿಂದ ಮನ್ನಣೆ ಪಡೆದುವು. ಇದಲ್ಲದೆ ಮಗ್ಗೆಯ ಮಾಯಿದೇವನು ಶತಕತ್ರಯವನ್ನೂ ಗುರುಬಸವನು ಶಿವಯೋಗಾಂಗಭೂಷಣ ಮೊದಲಾದ ಸಪ್ತಕಾವ್ಯಗಳನ್ನೂ ಬರೆದಿರು ವರು ಇಷ್ಟುದಿವಸ ವಿಜಯನಗರದ ಆಸ್ಥಾನದಲ್ಲಿ ಸಂಸ್ಕೃತಭಾಷೆ ಗೆಯೇ ಮಹತ್ವದ ಸ್ಥಾನವಿತ್ತು. ಕನ್ನಡಕ್ಕೊಂದು ವಿಶೇಷಸ್ಥಾನವು ದೊರೆತುದು ಈ ರಾಜನ ಕಾಲದಲ್ಲಿಯೆ ಎಂದು ಹೇಳಬಹುದು.

ಪ್ರೌಢ ದೇವರಾಯನು ೧೪೪೬ ರಲ್ಲಿ ಮರಣ ಹೊಂದಲು ಅವನ ಹಿರಿಯ ಮಗನಾದ ಮಲ್ಲಿಕಾರ್ಜುನನು ಸಿಂಹಾಸನವನ್ನೇರಿ ೨೧ ವರ್ಷ ರಾಜ್ಯವನ್ನಾಳಿದನು. [ ೧೪೪೬-೧೪೬೭. ]

---

## ೭ ಸಾಳುವವಂಶ.

ಮಲ್ಲಿಕಾರ್ಜುನನ ತರುವಾಯ ಅವನ ಮಲತಮ್ಮನಾದ ವಿರೂಪಾಕ್ಷನು ಪಟ್ಟವೇರಿದನು. ಮದ್ಯಪಾನ ಸ್ತ್ರೀಸಂಗಗಳಲ್ಲದೆ ಉಳಿದ ವಿಷಯವೇ ಗೊತ್ತಿರಲಿಲ್ಲಾತನಿಗೆ. ಸರದಾರರಿಗೂ ಸೇನಾಧ್ಯಕ್ಷರಿಗೂ ಅವನ ದರ್ಶನವೇ ದುರ್ಲಭವಾಯಿತು. ಕುಡಿದು ಅಮಲೇರಿದಾಗ ಅವನಿಂದ ಅಲ್ಲದ ಸಲ್ಲದ ಕೃತ್ಯಗಳೂ ನಡೆದುವು. ಮುಸಲ್ಮಾನರಿಗೆ ಇದೀಗ ಒಳ್ಳೆಯ ಸಮಯ ಸಾಧಿಸಿತು. ವಿಜಯನಗರದ ಅದೆಷ್ಟೋ ಭಾಗವನ್ನು ಎತ್ತಿ ಹಾಕಿದರವರು. ಹೆಚ್ಚೇನು, ಉಳಿದ ಪ್ರಜೆಗಳ ಮಾತಂತಿರಲಿ ವಿರೂಪಾಕ್ಷರಾಯನ ಮಕ್ಕಳಿಗೆಯೆ ಅವನ ಆಳಿಕೆಯು ಬೇಡೆನಿಸಿತು. ಅವನ ಹಿರಿಯ ಮಗನಾದ ರಾಜಶೇಖರನು ತಂದೆಯನ್ನು ಕೊಂದು ಹಾಕಿದನು.

ಅದೊಂದು ಆವೇಶದಲ್ಲಿ ತಂದೆಯನ್ನು ಕೊಂದುಹಾಕಿದುದೇನೋ ಆಯಿತು. ಆದರೆ ಪಿತೃಘಾತದಿಂದ ಪ್ರಾಪ್ತವಾದ ರಾಜ್ಯವನ್ನು ಆಳಲು ಅವನ ಮನಸು ಒಪ್ಪಲಿಲ್ಲ. "ಈ ರಾಜ್ಯಕ್ಕೆ ನಿಜವಾದ ಅಧಿಕಾರಿಯು ನಾನೇನೋ ನಿಜ. ಆದರೆ ಪಿತೃವಧೆಯಂತಹ ಮಹಾಪಾತಕವು ನನ್ನಿಂದ ಘಟಿಸಿತು. ಪಿತೃವಧೆ ಮಾಡಿದ ಮಹಾಪಾಪಿನಾನು ! ನನ್ನಂತಹನು ಸಿಂಹಾಸನದ ಮೇಲೆ ಕುಳಿತುಕೊಳ್ಳಲು ಯೋಗ್ಯನಲ್ಲ. ನನ್ನ ತಮ್ಮನಿಂದ ಅದಾವುದೂ ಆಗಿಲ್ಲ. ಅವನೇ ರಾಜ್ಯಭಾರ ಮಾಡಲಿ ! " ಎಂದು ಹೇಳಿ ತಮ್ಮನಾದ ಇಮ್ಮಡಿ ವಿರೂಪಾಕ್ಷನಿಗೆ ಆ ಸಿಂಹಾಸನವನ್ನು ಬಿಟ್ಟುಕೊಟ್ಟನು.

ವಿರೂಪಾಕ್ಷನು ವಿಲಾಸದಲ್ಲಿಯೂ ಕ್ರೂರತನದಲ್ಲಿಯೂ ತಂದೆಯ

ಇಮ್ಮಡಿಯೇ ಆಗಿದ್ದನು. ತನಗೆ ರಾಜ್ಯವನ್ನು ಬಿಟ್ಟುಕೊಟ್ಟ ಅಣ್ಣನನ್ನು ಮಣ್ಣುಗೂಡಿಸಿ ಬಿಟ್ಟನು. ರಾಜ್ಯದ ಒಂದೊಂದೇ ಭಾಗಗಳು ಕೈಬಿಡತೊಡಗಿದುವು. ಅದನ್ನು ನೋಡಿ ಸರದಾರರಿಗೂ ಸಾಮಂತರಿಗೂ ಕೈಮುಚ್ಚಿಕೊಂಡು ಕುಳಿತುಕೊಳ್ಳುವುದಾಗಲಿಲ್ಲ. ಪ್ರಜೆಗಳ ಸುಖದುಃಖಗಳನ್ನು ವಿಚಾರಿಸದೆ ವಿಲಾಸದಲ್ಲಿಯೇ ಕಾಲ ಕಳೆಯುವ ರಾಜನು ರಾಜನೇ ? ರಾಜನ ಹೇಡಿತನದಿಂದ ರಾಜ್ಯದ ಅಂಗಗಳೊಂದೊಂದೂ ಕೈಬಿಡುವುದನ್ನು ಕಂಡು ಸಾಮ್ರಾಜ್ಯನಿಷ್ಠರಾದ ಸರದಾರರಿಗೆ ಹೇಗೆ ಸಹಿಸಿ ಕೊಳ್ಳುವುದಾದೀತು ? ಅದಾಗ ತೋರಿಸಬೇಕಾದುದು ಸ್ವಾಮಿಭಕ್ತಿಯಲ್ಲ, ಸಾಮ್ರಾಜ್ಯ ಭಕ್ತಿ! ಅಂತಹ ಸ್ವಾಮಿಯನ್ನು ಹೊಡೆದೋಡಿಸುವುದೇ ಯೋಗ್ಯ ! ಅದನ್ನೇ ಮಾಡಿದರು ಅವನ ಸರದಾರರು ಸಾಮಂತರು !

ಆಗ ವಿಜಯನಗರದ ಪೂರ್ವಭಾಗಕ್ಕೆ ಸಾಳುವ ಮನೆತನದ ಸಾಮಂತರು ಒಡೆಯರಾಗಿದ್ದರು. ವಿರೂಪಾಕ್ಷನ ಕಾಲದಲ್ಲಿ ಅಲ್ಲಿ ಸಾಳುವ ನರಸಿಂಹನು ಆಳುತಿದ್ದನು. ಅವನು ಉಳಿದ ಸಾಮಂತ ಸರದಾರರೊಡನಾಲೋಚಿಸಿ ವಿರೂಪಾಕ್ಷನನ್ನು ಹೊಡೆದೋಡಿಸಿ ತನೇ ಸಾಮ್ರಾಜ್ಯಕ್ಕೆ ಒಡೆಯನಾದನು. ( ೧೪೮೬ ). ಪರಚಕ್ರದ ವಶಕ್ಕೆ ಹೋದ ಬಹುತರ ಎಲ್ಲ ಭಾಗಗಳನ್ನು ತಿರುಗಿ ಸಂಪಾದಿಸಿ ಸಾಮ್ರಾಜ್ಯದ ಗೌರವವನ್ನುಳಿಸಿದನು. ಇಂತು ಸಾಳುವ ನರಸಿಂಹನು ಒಡೆಯನಾದುದರಿಂದ ಸಾಮ್ರಾಜ್ಯಕ್ಕೆ ಬಂದೊದಗಿದ ಆಪತ್ತು ದೂರವಾಯಿತು. ಸಾಳುವ ನರಸಿಂಹನಿಂದಾದ ಸಾಮ್ರಾಜ್ಯಾಪಹರಣವು ಪ್ರಜೆಗಳಿಗೆ ಸುಖಪ್ರದವಾಗಿಯೇ ಪರಿಣಮಿಸಿತು. ಇಮ್ಮಡಿ ಹರಿಹರನಿಗೆ ಸಾಳುವ ಗುಂಡನೆಂಬ ಮಂತ್ರಿಯಿದ್ದನು. ಇವನ ಮಗ ಮಂಗರಾಜ. ಮಂಗರಾಜನಿಗೆ ಗೌತರಾಜನೂ ಆ ಗೌತನಿಗೆ ಗುಂಡರಾಜನೂ ಹುಟ್ಟಿದರು.

ಸಾಳುವ ನರಸಿಂಹನು ಈ ಗುಂಡರಾಜನ ಮಗನು. ಚಂದ್ರವಂಶ ದವರೆಂದು ಹೇಳಿಕೊಂಡಿರುವರೀ ಮನೆತನದವರು.

ತುಳುವ ವಂಶಕ್ಕೆ ಸೇರಿದ ಈಶ್ವರನೂ ಅವನ ಮಗ ನರ ಸಿಂಗನೂ ಸಾಳುವ ನರಸಿಂಹನ ಸೇನಾನಾಯಕರಾಗಿದ್ದರು. ಇವ ರಿಬ್ಬರೂ ಒಳ್ಳೇ ಶೂರರು. ಇವರಿಬ್ಬರ ಸಹಾಯದಿಂದ ಸಾಳುವ ನರ ಸಿಂಹನು ವಿಜಯಯಾತ್ರೆ ಹೊರಟು ಮೊದಲು ವಿಜಯನಗರದ ಅಧೀ ನವಾಗಿದ್ದು ಪರಚಕ್ರಗಳಿಂದಾಕ್ರಮಿಸಲ್ಪಟ್ಟ ಸೀಮೆಗಳನ್ನೆಲ್ಲ ತಿರುಗಿ ಸಂಪಾದಿಸಿದನು. ಇನ್ನುಳಿದುವು ರಾಯಚೂರು, ಮುದಗಲ್ಲು, ಉದಯ ಗಿರಿ ಎಂಬ ಮೂರು ಕೋಟೆಗಳು. ಇವನ್ನೂ ತಿರುಗಿ ಸಂಪಾದಿಸುವ ಪ್ರಯತ್ನದಲ್ಲಿದ್ದಾಗಲೇ ಮರಣ ಕಾಲವು ಸಮೀಪಿಸಿತು ತನ್ನ ತರು ವಾಯ ಅವನ್ನೂ ತಿರುಗಿ ಸಂಪಾದಿಸಿ ಸಾಮ್ರಾಜ್ಯದ ಗೌರವದಲ್ಲಿ ಕುಂದು ಬಾರದಂತೆ ನೋಡಿಕೊಳ್ಳಬೇಕೆಂದು ಈ ಸೇನಾನಾಯಕರಿಗೆ ಹೇಳಿ ತನ್ನ ಚಿಕ್ಕ ಮಕ್ಕಳನ್ನು ಅವರ ವಶಕೊಪ್ಪಿಸಿ ದೇಹವಿಟ್ಟ ನಾತ.

ಪ್ರಜೆಗಳ ದುಃಖವನ್ನು ದೂರಮಾಡಿ ಪ್ರಭುಗಳನ್ನು ಗೌರವಿಸಿ ಪ್ರಭುತ್ವಮಾಡಿ ಹೆಸರುವಾಸಿಯಾದ ಈ ಸಾಳುವ ನರಸಿಂಹನ ಕಾಲ ದಲ್ಲಿ ವಿಜಯನಗರ ರಾಜ್ಯಕ್ಕೆ ನರಸಿಂಗರಾಜ್ಯವೆಂದೇ ಹೆಸರಾಯಿತು. ಮುಸಲ್ಮಾನ ಇತಿಹಾಸಕಾರರೂ ಆ ಕಾಲದಲ್ಲಿ ಈ ದೇಶಕ್ಕೆ ವ್ಯಾಪಾರ ಕ್ಕಾಗಿ ಬಂದ ಪಾಶ್ಚಾತ್ಯರೂ ತಮ್ಮ ಬರಹಗಳಲ್ಲಿ ನರಸಿಂಗರಾಜ್ಯ ವೆಂದೇ ಉಲ್ಲೇಖಿಸಿದ್ದಾರೆ.

ಹಿಂದುಸ್ಥಾನದ ದಂಡೆಯ ಮೇಲೆ ಪಾಶ್ಚಾತ್ಯರು ವ್ಯಾಪಾರ ಕ್ಕಾಗಿ ಕಾಲಿಟ್ಟುದು ಈ ನರಸಿಂಗನ ಆಳಿಕೆಯಲ್ಲಿಯೇ. ಹಿಂದೂ ದೇಶದ ಐಶ್ವರ್ಯವನ್ನು ಕೇಳಿ ವ್ಯಾಪಾರಮಾಡಲು ಬಯಸಿ

ಪೋರ್ಚುಗೀಜ ದೊರೆಯಾದ ಡಾಮ ಮಾನ್ಯೂಅಲನು ಹಿಂದುಸ್ಥಾನಕ್ಕೆ ಬರುವ ಜಲಮಾರ್ಗವನ್ನು ಶೋಧಿಸುವುದಕ್ಕಾಗಿ 'ವಾಸ್ಕೊ ಡೀ ಗಾಮನನ್ನು' ಕಳಿಸಿಕೊಟ್ಟನು. ತುಸು ದಿವಸಗಳಲ್ಲಿಯೇ ಹಿಂದುಸ್ಥಾನದ ಪಶ್ಚಿಮ ದಂಡೆಯಲ್ಲಿರುವ ಕೆಲ ಪ್ರದೇಶವು ಅವರ ಅಧೀನವಾಯಿತು. ವಿಜಯನಗರದ ಕೂಡ ಅವರ ವ್ಯಾಪಾರವು ಒಳ್ಳೇ ಭರದಿಂದ ನಡೆಯಿತು. ಈ ನಿಮಿತ್ತದಿಂದ ಬಂದ ಪೋರ್ಚುಗೀಜ ಪ್ರವಾಸಿಗರೂ ವಿಜಯನಗರ ಸಾಮ್ರಾಜ್ಯದ ವಿಷಯವಾಗಿ ಅನೇಕ ಸಂಗತಿಗಳನ್ನು ಬರೆದಿಟ್ಟಿದ್ದಾರೆ ವಿಜಯನಗರದ ಇತಿಹಾಸವನ್ನರಿಯಲು ಇವು ಒಳ್ಳೇ ಸಹಕಾರಿಗಳಾಗಿವೆ

ಸಾಳುವ ನರಸಿಂಹನು ೧೫ ವರ್ಷಗಳ ವರೆಗೆ ರಾಜ್ಯಭಾರ ಮಾಡಿ ಕಾಲವಶನಾದ ಮೇಲೆ ಅವನ ಹಿರಿಯ ಮಗನಾದ ಇಮ್ಮಡಿ ನರಸಿಂಹನನ್ನು ಪಟ್ಟಕ್ಕೆ ಕುಳ್ಳಿರಿಸಿ ನರಸನಾಯಕನು ತಾನೇ ಸರ್ವಾಧಿಕಾರಿಯಾಗಿ ಕಾರುಬಾರ ಸಾಗಿಸತೊಡಗಿದನು. ಬರಬರುತ್ತ ಆ ಇಮ್ಮಡಿ ನರಸಿಂಹನನ್ನು ಮೂಲೆಗೊತ್ತಿ ತಾನೇ ಪಟ್ಟವನ್ನಾಕ್ರಮಿಸಿದನು. (೧೪೯೬) ಸಾಳುವ ನರಸಿಂಹನಾಕ್ರಮಿಸಿದ ಪಟ್ಟವು ಮುಂದೊಂದು ತಲೆಯೂ ನಡೆಯದೆ ತುಳುವ ವಂಶದ ನರಸನಾಯಕನಿಂದಾಕ್ರಮಿಸಲ್ಪಟ್ಟಿತು. ಹೇಗೆ ಬಂದಿದ್ದಿತೋ ಹಾಗೆ ಎರಡನೆಯವರ ವಶಕ್ಕೆ ಹೋಯಿತು. ಇನ್ನು ಮುಂದೆ ಈ ತುಳುವ ವಂಶದ ರಾಜರೇ ವಿಜಯನಗರದಲ್ಲಾಳತೊಡಗಿದರು.

ಮುಂದಿನ ಕಾಲದ ವಿಜಯನಗರದ ಇತಿಹಾಸವನ್ನು ತಿಳಿಯುವ ಮೊದಲು ಇದೇ ಕಾಲಕ್ಕೆ ಬಾಮನೀ ರಾಜ್ಯದಲ್ಲುಂಟಾದ ಅದೊಂದು ಮಹತ್ವದ ಸ್ಥಿತ್ಯಂತರವನ್ನರಿಯುವುದು ಅವಶ್ಯ. ವಿಜಯನಗರ ಸಾಮ್ರಾಜ್ಯವು ಅದು ಹೇಗೆ ಸಾಮಂತರಿಂದಾಕ್ರಮಿಸಲ್ಪಟ್ಟಿತೊ

ಹಾಗೆಯೇ ಆ ಅಂಟುರೋಗವು ಬಾಮನೀ ರಾಜ್ಯಕ್ಕೂ ಬಡಿದು ಕೊಂಡಿತು. ಈ ಕಾಲದಲ್ಲಿ ಬಾಮನೀ ರಾಜ್ಯದ ಸುಲ್ತಾನನಾಗಿದ್ದ ಮಹಮ್ಮದಶಹನನ್ನು ಮೂಲೆಗೊತ್ತಿ ಅವನ ಸರದಾರರೇ ಪ್ರಬಲರಾಗಿ ಸ್ವತಂತ್ರ ರಾಜ್ಯಗಳನ್ನು ಸ್ಥಾಪಿಸಿದರು. ವರ್ಹಾಡದ ಇಮಾದಶಾಹಿ, ವಿಜಾಪುರದ ಆದಿಲಶಾಹಿ, ಅಹಮ್ಮದನಗರದ ನಿಜಾಮ ಶಾಹಿ, ಬೀದರದ ಬರೀದ ಶಾಹಿ, ಗೋವಳಕೊಂಡದ ಕುತುಬಶಾಹಿಗಳೇ ಆ ಐದು ಸ್ವತಂತ್ರ ರಾಜ್ಯಗಳು.

ವಿಜಯನಗರ ಬಾಮನೀ ರಾಜ್ಯಗಳು ಕೂಡಿಯೇ ಸ್ಥಾಪಿಸಲ್ಪಟ್ಟವು. ೧೪೪೦ ರ ವರೆಗೆ ಒಂದೇ ಮನೆತನಕ್ಕೆ ಸಾಗಿ ಬಂದುವು. ೧೪೪೦ ರ ಸುಮಾರಕ್ಕೆ ಎರಡೂ ಒಂದೇ ರೀತಿಯಲ್ಲಿ ಸರದಾರರಿಂದಲೂ ಸೇನಾನಾಯಕರಿಂದಲೂ ಆಕ್ರಮಿಸಲ್ಪಟ್ಟವು. ಆದರೊಂದು ವ್ಯತ್ಯಾಸ; ಸಾಮಂತರಿಂದ ಆಕ್ರಮಿಸಲ್ಪಟ್ಟ ವಿಜಯನಗರ ಸಾಮ್ರಾಜ್ಯವು ಸಾಮ್ರಾಜ್ಯವಾಗಿಯೇ ಉಳಿಯಿತು. ಆದರೆ ಬಾಮನೀರಾಜ್ಯವು ಒಡೆದು ಹಂಚಿಹೋಯಿತು. ಇದು ಆವೆರಡು ರಾಜ್ಯಗಳ ಸಾಮಂತ ಸರದಾರರ ಸ್ವಭಾವದಲ್ಲಿರುವ ಒಂದು ವ್ಯತ್ಯಾಸವನ್ನೇ ತೋರಿಸುತ್ತಿದೆ. ಹಿಂದೂ ಸರದಾರರಲ್ಲಿ ಸಾಮ್ರಾಜ್ಯದ ಬಗ್ಗೆ ಅಭಿಮಾನವಿದ್ದಿತು. ಆ ಅಭಿಮಾನವು ಮುಸಲ್ಮಾನ ಸರದಾರರಲ್ಲಿದ್ದಿಲ್ಲ. ಅವರಲ್ಲಿ ರಾಜ್ಯಕ್ಕಿಂತಲೂ ಸ್ವಾರ್ಥವು ಹೆಚ್ಚಾಗಿದ್ದಿತು. ಆದರಿಂದ ಅವರು ತಮಗೆ ದೊರೆತಷ್ಟು ರಾಜ್ಯವನ್ನು ಎತ್ತಿಹಾಕಿ ಸ್ವತಂತ್ರ ರಾಜ್ಯಗಳನ್ನು ಸ್ಥಾಪಿಸಿದರು. ಇಮ್ಮಡಿ ವಿರೂಪಾಕ್ಷನನ್ನು ಹೊಡೆದೋಡಿಸಿ ರಾಜ್ಯವನ್ನಾಕ್ರಮಿಸಿದ ಸಾಳುವ ನರಸಿಂಹನು ಸಾಮ್ರಾಜ್ಯದ ಗೌರವವನ್ನು ಕಾಯುವುದಕ್ಕಾಗಿಯೆ ಹೆಣಗಿದನು. "ಮೊದಲು ಸಾಮ್ರಾಜ್ಯಕಾಧೀನವಾದ ರಾಯಚೂರು ಮುದಗಲ್ಲು ಕೋಟೆಗಳು ತನ್ನ ಕೈಸೇರಲಿಲ್ಲ

ಸಾಮ್ರಾಜ್ಯದ ಪೂರ್ವ ಗೌರವವನ್ನು ತಂದುಕೊಡುವುದು ತನ್ನಿಂ ದಾಗಲಿಲ್ಲ!" ಎಂದು ಚಡಪಡಿಸಿ ಅಷ್ಟನ್ನು ತನ್ನ ತರುವಾಯದವರು ಮಾಡಬೇಕೆಂದೂ ಇಲ್ಲದಿದ್ದರೆ ತನ್ನ ಎದೆ ಬೇಯುವುದಿಲ್ಲವೆಂದೂ ಹೇಳಿದ ನರಸಿಂಹನಲ್ಲಿ ಸಾಮ್ರಾಜ್ಯದ ಅಭಿಮಾನವು ಎಷ್ಟಿರಬೇಕು!

## ೮ ಕೃಷ್ಣದೇವರಾಯ.

ನರಸನಾಯಕನಿಗೆ ತಿಪ್ಪಮ್ಮ, ನಾಗಲಾದೇವಿ, ಓಬಾಂಬಿಕೆ ಎಂದು ಮೂವರು ಹೆಂಡಿರು. ತಿಪ್ಪಮ್ಮನಲ್ಲಿ ವೀರನರಸಿಂಹನೂ ನಾಗಲಾದೇವಿಯಲ್ಲಿ ಕೃಷ್ಣರಾಯನೂ ಓಬಾಂಬಿಕೆಯಲ್ಲಿ ಅಚ್ಯುತರಾಯ ರಂಗರಾಯರೂ ಹುಟ್ಟಿದರು. ನರಸನಾಯಕನ ತರುವಾಯ ಅವನ ಹಿರಿಯ ಮಗನಾದ ವೀರನರಸಿಂಹನು ಪಟ್ಟಕ್ಕೆ ಕುಳಿತು (೧೫೦೪) ಐದು ವರ್ಷಗಳವರೆಗೆ ರಾಜ್ಯಭಾರ ಮಾಡಿ ಕಾಲವಶನಾದ ಮೇಲೆ ಅವನ ಮಲತಮ್ಮನಾದ ಕೃಷ್ಣದೇವರಾಯನು ಪಟ್ಟಕ್ಕೆ ಬಂದನು. ವಿಜಯನಗರದ ರಾಜರಲ್ಲಿ ಒಳ್ಳೇ ಘನತೆವಡೆದವನೆಂದರೆ ಈ ಕೃಷ್ಣದೇವರಾಯನೆ. ಸಾಮ್ರಾಜ್ಯದ ವೈಭವವು ಶಿಖರಕ್ಕೆ ಮುಟ್ಟಿತೀತನ ಕಾಲದಲ್ಲಿ.

ಕೃಷ್ಣದೇವರಾಯನ ಪ್ರತಾಪವನ್ನೂ ಕೀರ್ತಿಯನ್ನೂ ಕೇಳಿ ಗೋವೆಯ ಪೋರ್ಚುಗೀಜ ಗವರ್ನರನು ತನ್ನ ರಾಯಭಾರಿಯನ್ನು ಕಳುಹಿದನಾತನ ಕಡೆಗೆ. ರಾಯಭಾರಿಯನ್ನು ಕಳುಹಿದುದು ವಿಜಯನಗರದ ಕೂಡ ವ್ಯಾಪಾರ ಬೆಳಿಸುವ ಉದ್ದೇಶದಿಂದ. ಕೃಷ್ಣದೇವರಾಯನಿಗೂ ಇದೇ ಬೇಕಾಗಿದ್ದಿತು. ವಿಜಯನಗರದವರಿಗಾಗಲಿ ಬಾಮನಿಯವರಿಗಾಗಲಿ ಶಸ್ತ್ರಗಳನ್ನೂ ಕುದುರೆಗಳನ್ನೂ ಪೂರೈಸುತಿದ್ದರೇ ಪೋರ್ಚುಗೀಜರು. ವಿಜಯಪುರದ ಸುಲ್ತಾನನ ಕಡೆಗೆ ಹೋಗುವ ಶಸ್ತ್ರಾಸ್ತ್ರಗಳನ್ನು ತಡೆದು ಅವೆಲ್ಲವು ತನ್ನ ಕಡೆಗೆಯೇ ಬರಬೇಕೆಂದೂ ವಿಜಯಪುರದವರಿಗಿಂತ ತನ್ನ ಬಲವನ್ನು ಹೆಚ್ಚಿಸಿಕೊಳ್ಳಬೇಕೆಂದೂ ಅವನಿಚ್ಛೆ. ಆ ಪ್ರಕಾರ ಪೋರ್ತುಗೀಜರ ಕೂಡ

ಒಡಂಬಡಿಕೆ ಮಾಡಿಕೊಂಡು ಪಶ್ಚಿಮ ಸಮುದ್ರ ತೀರದಲ್ಲಿ ವಖಾರ್‌ಗಳನ್ನು ಕಟ್ಟಿಕೊಳ್ಳಲು ಅವರಿಗೆ ಅನುಜ್ಞೆಯನ್ನಿತ್ತನು.

ಇದೇಕಾಲದಲ್ಲಿ ಇತ್ತ ದಕ್ಷಿಣದಲ್ಲಿ ಉಮ್ಮತ್ತೂರ ಮಾಂಡಲಿಕ ಅರಸು ಮಲೆತು ನಿಂತಿದ್ದನು. ಅದಕಾಗಿ ಕೃಷ್ಣ ದೇವರಾಯನು ದಕ್ಷಿಣದ ಕಡೆಗೆ ದಂಡೆತ್ತಿ ಹೋಗಿ [ ೧೫೦೯-೧೫೧೦ ] ಉಮ್ಮತ್ತೂರ ಮಾಂಡಲಿಕನ ಸೊಕ್ಕಡಗಿಸಿ ಶಿವಸಮುದ್ರ ಶ್ರೀರಂಗಪಟ್ಟಣಗಳನ್ನು ಹಿಡಿದುಕೊಂಡು ಹಾಗೆಯೆ ಕಾವೇರಿ ನದಿಯನ್ನು ದಾಟಿ ಚೋಳ, ಚೇರ, ಪಾಂಡ್ಯ ಮಲಯಾಳ ದೇಶಗಳನ್ನು ಹೊಕ್ಕು ಅಲ್ಲಿಯ ಚಿಕ್ಕ ಪುಟ್ಟ ರಾಜಮನೆತನಗಳನೆಲ್ಲ ತನಗಾಧೀನವಾಗಿ ಮಾಡಿಕೊಂಡು ಆ ಪ್ರದೇಶವನ್ನೆಲ್ಲ ಮೂರು ನಾಡುಗಳಾಗಿ ವಿಭಾಗಿಸಿ ಒಬ್ಬೊಬ್ಬ ಸಾಮಂತರ ವಶಕ್ಕೆ ಕೊಟ್ಟು ಹಿಂತಿರುಗಿದನು.

ಇದಾದ ಮೇಲೆ ರಾಯನು ಪೂರ್ವದಿಗ್ಯಾತ್ರೆಗಾಗಿ ಹೊರಟನು. [ ೧೫೧೩-೧೬ ] ಸಾಳುವನರಸಿಂಹನು ದೇಹವಿಡುವಾಗ "ರಾಯಚೂರು ಮುದಗಲ್ಲು ಉದಯಗಿರಿಗಳನ್ನು ತೆಗೆದು ಕೊಂಡಲ್ಲದೆ ತನ್ನ ಆತ್ಮಕ್ಕೆ ಶಾಂತಿಯಿಲ್ಲ" ವೆಂದು ಹೇಳಿದ ಮಾತು ಕೃಷ್ಣರಾಯನಿಗೂ ಗೊತ್ತಾಗಿದ್ದಿತು. ಅದು ಅವನ ಕಿವಿಯಲ್ಲಿ ದುಮುದುಮಿಸುತಿದ್ದಿತು. ಉದಯಗಿರಿ ಕೊಂಡವೀಡು ಕೋಟೆಗಳು ಉತ್ಕಲ ದೇಶದ ರಾಜನ ವಶದಲ್ಲಿದ್ದುವು. ರಾಯನು ಮೊದಲು ಉದಯಗಿರಿಯನ್ನು ಮುತ್ತಿ ಅಲ್ಲಿಯ ಪ್ರಹರೇಶ್ವರ ಮಹಾಪಾತ್ರನನ್ನು ಸೋಲಿಸಿ ಹಾಗೆಯೆ ಮುಂದಕ್ಕೆ ಸಾಗಿ ಹೋಗಿ ಕೊಂಡವೀಡು ವಿನುಕೊಂಡ ಬೆಲ್ಲಂಕೊಂಡ ನಾಗಾರ್ಜುನಕೊಂಡ ಅದ್ದಂಕಿ ಮೊದಲಾದ ಅನೇಕ ಕೋಟೆಗಳನ್ನು ಹಿಡಿದುಕೊಂಡನು. ಮಾರ್ಗದಲ್ಲಿ ಅಡ್ಡಬಂದ ಗೋವಳಕೊಂಡದ ಕುತುಬಶಹನನ್ನು ಹೊಡೆದಟ್ಟಿದನು. ವೀರಭದ್ರ

ಪತಿ, ಕಸವಾ ಪಾತ್ರ ಮೊದಲಾದವರಿಗೆ ಅಭಯ ಹಸ್ತವನ್ನು ಕೊಟ್ಟು ಕನಕಗಿರಿಯನ್ನು ಹಿಡಿದು ಪೊಟ್ಟನೂರ ಬಳಿ ಜಯಸ್ತಂಭ ವನ್ನು ನೆಟ್ಟನು. ಮತ್ಸ್ಯವಂಶೀಯ ಒಡ್ಡಾದಿರಾಜರನ್ನು ಮಟ್ಟುಹಾಕಿ ದನು. ಉತ್ಕಲದೇಶ (ಒರಿಸಾ)ವನ್ನು ಸೇರಿ ಕಟಕ ಪುರಿಯನ್ನು ಸುಟ್ಟು ಅಲ್ಲಿಯ ರಾಜಕುಮರಿಯೊಡನೆ ಹಸೆಸಿಂದನು. ಉದಯಗಿರಿಯ ಬಳಿ ಬೆಟ್ಟದ ಮೇಲಿರುವ ಶ್ರೀಕೃಷ್ಣ ಮೂರ್ತಿಯನ್ನು ತಂದು ವಿಜಯನಗರ ದಲ್ಲೊಂದು ವಿಸ್ತಾರವಾದ ಮಂದಿರವನ್ನು ಕಟ್ಟಿಸಿ ಅದರಲ್ಲಿ ಆ ಮೂರ್ತಿಯನ್ನು ಪ್ರತಿಷ್ಠೆಮಾಡಿ ಆ ದೇವಸ್ಥಾನಕ್ಕೆ ಹಲವು ದತ್ತಿಗ ಳನ್ನು ಬಿಟ್ಟುಕೊಟ್ಟನು.

ಕೃಷ್ಣದೇವರಾಯನಿಗೆ ವಶವಾಗದೆ ಉಳಿದುವೆಂದರೆ ರಾಯ ಚೂರು ಮುದಗಲ್ಲು ಕೋಟೆಗಳು, ಅವುಗಳ ನೆರೆಯ ಪ್ರದೇಶ. ಈ ಪ್ರದೇಶವು ಬಾಮನೀ ರಾಜ್ಯದಿಂದಾದ ಐದು ರಾಜ್ಯಗಳಲ್ಲಿ ಒಂದಾದ ವಿಜಾಪುರದ ಆದಿಲಶಹನ ವಶದಲ್ಲಿ ಇದ್ದಿತು. ಬಾಮನೀ ರಾಜ್ಯಗಳಿಂ ದುಂಟಾದ ರಾಜ್ಯಗಳಲ್ಲಿ ವಿಜಾಪುರದ ಆದಿಲಶಾಹಿಯೇ ಪ್ರಬಲ ವಾದುದು. ಆದಿಲಶಹನ ಮೇಲೆ ದಂಡೆತ್ತಿ ಹೋಗಲು ಸಾಕಷ್ಟು ಕಾರಣಗಳಿದ್ದಿಲ್ಲ. ಆದರಿಂದ ಮನದಲ್ಲಿದ್ದರೂ ಯುದ್ಧದ ಪ್ರಸಕ್ತಿ ಯನ್ನು ತೆಗೆಯದೆ ೬-೫ ವರ್ಷಗಳವರೆಗೆ ಸುಮ್ಮನಿದ್ದನು. ಆದರೇನು! ಯುದ್ಧದ ಸಿದ್ಧತೆಯಲ್ಲಿಯೇ ಇದ್ದನೆಂದು ಹೇಳಬೇಕು. ಇಷ್ಟು ದಿನ ಎದುರಿಸಿದವರ ಸ್ಥಿತಿಯು ಬೇರೆ, ಆದಿಲಶಹನ ಸ್ಥಿತಿಯು ಬೇರೆ ಇದ್ದಿತು. ಆದಿಲಶಹನು ಸಾಮಾನ್ಯ ಮನುಷ್ಯನಾಗಿದ್ದಿಲ್ಲ. ಅಲ್ಲದೆ ಏನೊಂದು ಕಾರಣವಿಲ್ಲದೆ ಜಗಳ ತೆಗೆದಿದ್ದರೆ ಉಳಿದ ನಾಲ್ವರು ಸುಲ್ತಾನರೂ ಅವನಿಗೆ ನೆರವಾಗಬಹುದಾಗಿದ್ದಿತು. ಅವರೆಲ್ಲ ಒಂದಾ ದರೂ ಎದುರಿಸುವ ಸಾಮರ್ಥ್ಯವನ್ನು ತಂದುಕೊಳ್ಳಬೇಕಾಗಿದ್ದಿತು.

ಇಸ್ಮಾಯಿಲ ಆದಿಲಶಹನೂ ವಿಜಯನಗರದವರ ಬಲವನ್ನು ಕುಗ್ಗಿಸಬೇಕೆಂಬ ಹವಣಿಕೆಯಲ್ಲಿಯೇ ಇದ್ದನು. ಕೃಷ್ಣದೇವರಾಯನು ಕುದುರೆ ತರಲಿಕ್ಕೆಂದು ಕಳಿಸಿದ ಮುಸಲ್ಮಾನ ಸರದಾರನು ಫಿತೂರಿ ಯಾಗಿ ಹಣವನ್ನು ತೆಗೆದುಕೊಂಡು ವಿಜಾಪುರಕ್ಕೆ ಓಡಿಹೋದನು. ಅವನನ್ನು ತಿರುಗಿ ಕಳಿಸಬೇಕೆಂದು ರಾಯನು ಬರೆದ ಪತ್ರಕ್ಕೆ ಆದಿಲ ಶಹನಿಂದ ಹಾಗೆಹಾಗೆಯೇ ಉತ್ತರ ದೊರೆಯಿತು. ನೋರೆಯ ಮೇಲೆ ಕೈ ಎಳೆದಂತೆ. ರಾಯನಿಗದು ಸಹನವಾಗಲಿಲ್ಲ ಈ ಸಂಗತಿ ತನ್ನ ಸಾಮಂತರಿಗೂ ಉಳಿದ ನಾಲ್ವರು ಸುಲ್ತಾನರಿಗೂ ತಿಳಿಸಿದನು. ಅವರು "ವಿಜಾಪುರದ ಸುಲ್ತಾನನು ಕಳಿಸಿ ಕೊಡಬೇಕಾಗಿದ್ದಿತು. ಹಾಗೆ ಮಾಡ ಲಿಲ್ಲ. ಅವನಿಗೆ ಒಂದು ಕೈ ತೋರಿಸಬೇಕೆ''ಂದರು. ಆದಾಗಲೆ ತನ್ನ ಅಪಾರವಾದ ಸೈನ್ಯದೊಡನೆ ವಿಜಾಪುರದ ಮೇಲೆ ಸಾಗಿಹೋದನು. ಆ ಕಾಲದಲ್ಲಿ ವಿಜಾಪುರದ ರಾಜ್ಯದ ಮೇಲೆ ಸಾಗಿಹೋದ ಕೃಷ್ಣ ದೇವರಾಯನ ಸೈನ್ಯವು ಹತ್ತು ಲಕ್ಷಕ್ಕೆ ಮಿಕ್ಕಿದ್ದಿತೆಂದು ಪೋರ್ಚು ಗೀಜ ಪ್ರವಾಸಿಯಾದ ನೂನೀಜನು ಬರೆದಿರುವನು. ಆದಿಲಶಹನಿಗೆ ಈ ವರ್ತಮಾನವು ತಿಳಿಯಲು ಅವನೂ ಸಜ್ಜಾಗಿ ಬಂದನು. ಆದರೆ ಅವನಿಗೀಗ ಉಳಿದ ನಾಲ್ವರು ಸುಲ್ತಾನರ ಬೆಂಬಲವಿದ್ದಿಲ್ಲ. ತಮ್ಮಲ್ಲಿ ಪ್ರಬಲನಾದ ಆದಿಲಶಹನು ಜರ್ಜರನಾಗಲೆಂದೇ ಅವರ ಇಚ್ಛೆಯಾಗಿ ದ್ದಿತು. ಎರಡೂ ಸೈನ್ಯದ ನಡುವೆ ತುಮುಲ ಯುದ್ಧವಾಯಿತು. ಎರಡೂ ಕಡೆಯವರು ಈರ್ಷೆಯಿಂದ ಕಾದಿದರು. ಜಯಲಕ್ಷ್ಮಿಯು ರಾಯನ ಕೊರಳಿಗೆ ಮಾಲೆ ಹಾಕಿದಳು. ಆದಿಲಶಹನಿಗೆ ಜೀವವುಳಿಸಿ ಕೊಂಡು ಪಾರಾಗಬೇಕಾದರೆ ಸಾಕುಸಾಕಾಗಿ ಹೋಯಿತು. ರಾಯ ಚೂರು ರಾಯನ ವಶವಾಯಿತು. (೧೫೨೦) ಯುದ್ಧದಲ್ಲಿ ಪ್ರಾಣ ಕೊಟ್ಟ ವೀರರ ಪ್ರೇತಯಾತ್ರೆ ಮಾಡಿ ಉತ್ತರ ಕ್ರಿಯಾದಿಗಳನ್ನು

ಮುಗಿಸಿ, ರಾಯಚೂರಿನ ಪ್ರಜೆಗಳಿಗೆ ಅಭಯವನ್ನಿತ್ತು ಯುದ್ಧದಲ್ಲಿ ದೊರಿತ ಶಸ್ತ್ರಗಳ ಕಡೆಯು ಅನೇಕುದುರೆಗಳೊಡನೆಯೂ ಯುದ್ಧೋಪ ಯುಕ್ತ ಶಸ್ತ್ರಾಸ್ತ್ರಗಳೊಡನೆಯೂ ಮರಳಿದನು ರಾಯ. ರಾಯನಿ ಗೀಗ ಕೃತಕೃತ್ಯನಾದೆನೆಂದೆನಿಸಿತು. ಪೆಟ್ಟಿನಿಂದ ಆದಿಲಶಹನಿಗೆ ಕೃಷ್ಣ ದೇವರಾಯನಿರುವವರೆಗೂ ವಿಜಯನಗರದ ಕಡೆಗೆ ಕಣ್ಣೆತ್ತಿನೋಡುವ ಧೈರ್ಯವಾಗಲಿಲ್ಲ.

ಈ ಗೆಲುವಿನಿಂದ ಕೃಷ್ಣದೇವರಾಯನು ಮತ್ತನೇಗಡೆ ಆದಿಲ ಶಹನ ಕೂಡ ಗೆಳೆತನದ ಸಂಧಿಯನ್ನೇ ಮಾಡಿಕೊಂಡನು. ಆ ಗೆಳೆ ತನದ ಸಂಧಿಯನ್ನೇ ತನ್ನ ಜೀವಮಾನದ ವರೆಗೂ ನಡೆಸಿಕೊಂಡು ಹೋದನು ಈತನೊಬ್ಬನ ಕೂಡಲ್ಲ ಎಲ್ಲ ಮಾಂಡಲಿಕರೊಡನೆಯೂ ಅವನು ಗೆಳೆತನದ ಸಂಬಂಧವನ್ನೇ ಇಟ್ಟಿದ್ದನು. ತಾನು ಯುದ್ಧ ದಲ್ಲಿ ಸೋಲಿಸಿದ ಹಿಂದೂ ರಾಜಮನೆತನಗಳ ಕೂಡ ಶರೀರ ಸಂಬಂಧ ವನ್ನು ಬೆಳೆಸಿದ್ದನು. ಉತ್ಕಲದ ರಾಜಗುವರಿಯನ್ನು ಮದುವೆ ಯಾದಸಂಗತಿ ಮೇಲೆ ಹೇಳಿಯೆ ಇದೆ. ದಕ್ಷಿಣಕ್ಕೆ ಶ್ರೀರಂಗಪಟ್ಟ ಣದ ಮೇಲೆ ಸಾಗಿಹೋದಾಗ ಅಲ್ಲಿಯ ರಾಜಗುವರಿಯೊಬ್ಬಳನ್ನು ಮದುವೆಯಾಗಿದ್ದನು. ಎಲ್ಲ ಮಾಂಡಲಿಕರಿಗೂ ಅವನು ವಿಶೇಷ ಸ್ವಾತಂತ್ರ್ಯವನ್ನು ಕೊಟ್ಟಿದ್ದನು. ಅದೆಷ್ಟರಮಟ್ಟಿಗೆಯೆಂದರೆ ಹೊಸಬ ರಾರಾದರು ಈತನ ಮಾಂಡಲಿಕರ ರಾಜ್ಯದಲ್ಲಿ ಹೊಕ್ಕರೆ ಅವರು ಸ್ವತಂತ್ರ ರಾಜರೆಂದೇ ಭಾವಿಸುತಿದ್ದರು. ಇವನ ಮಾಂಡಲಿಕ ರಾಜರಕೂಡ ಪೋರ್ಚುಗೀಜ ರಾಯಭಾರಿಗಳು ಸ್ವತಂತ್ರವಾಗಿಯೇ ವ್ಯವಹಾರ ನಡಿಸುತಿದ್ದರಿಂದ ಮೇಲೆ ಅದೆಷ್ಟು ಸ್ವಾತಂತ್ರ್ಯವನ್ನು ಕೊಟ್ಟಿರಬೇಕು ಮಾಂಡಲಿಕರಿಗೆ! ಈ ದಿಗ್ವಿಜಯ ದಿಂದ ವಿಜಯನಗರ ಸಾಮ್ರಾಜ್ಯವು ಬಹು ವಿಸ್ತಾರವಾಯಿತು.

ಉತ್ತರದಲ್ಲಿ ಕೃಷ್ಣಾನದಿಯ ವರೆಗೂ, ಪೂರ್ವದಲ್ಲಿ ಕಟಕದ ವರೆಗೂ, ಪಶ್ಚಿಮದಲ್ಲಿ ಸಾಲಿಸೆಟ್ಟಿನ ವರೆಗೂ, ದಕ್ಷಿಣದಲ್ಲಿ ರಾಮೇಶ್ವರದ ವರೆಗೂ ಹಬ್ಬಿತು.

ಕೃಷ್ಣದೇವರಾಯನು ರಾಜ್ಯವನ್ನು ವಿಸ್ತರಿಸುವಲ್ಲಿಯಷ್ಟೇ ಕಾಲ ಕಳೆದನೆಂದಲ್ಲ. ರಾಜ್ಯದಲ್ಲಿಯ ವಿದ್ಯೆ, ಕಲೆ, ವ್ಯಾಪಾರ ಮೊದಲಾದುವೆಲ್ಲವನ್ನು ಊರ್ಜಿತ ಸ್ಥಿತಿಗೆ ತರಲು ಪ್ರಯತ್ನಿಸಿದನು. ಹಾಗೂ ಅವರಲ್ಲಿ ಯಶಸ್ಸು ಪಡೆದನು. ವ್ಯಾಪಾರದ ಬೆಳವಣಿಗೆಗಾಗಿ ಪೋರ್ಚುಗೀಜರ ಕೂಡ ಒಪ್ಪಂದ ಮಾಡಿಕೊಂಡ ಸಂಗತಿ ಈ ಮೊದಲು ಹೇಳಿ ಆಗಿದೆ. ವಿಜಯನಗರದ ರೂಕ್ಷ ಪ್ರದೇಶವನ್ನು ಫಲವತ್ತಾಗಿ ಮಾಡುವುದಕ್ಕಾಗಿ ಕೊರಗಲ್ಲು [ ಕುರವಿಗಡ್ಡೆ ] ಹತ್ತರ ತುಂಗಭದ್ರೆಗೆ ಒಡ್ಡುಹಾಕಿಸಿ ಕಾಲುವೆ ತೆಗೆಸಿದನು. ಆ ಕಾಲುವೆಯು ಬಸವಣ್ಣನ ಕಾಲುವೆಯೆಂದು ಈಗಲೂ ಪ್ರಸಿದ್ಧವಿದೆ. ಅನೇಕ ಕೆರೆ ಕಾಲುವೆಗಳನ್ನು ಕಟ್ಟಿಸಿದನು. ಇವನ ಕಾಲದಲ್ಲಾದ ಗುಡಿಗುಂಡಾರಗಳಂತೂ ಲೆಕ್ಕವಿಲ್ಲದಷ್ಟು. ತಾನು ಸಿಂಹಾಸನವನ್ನೇರಿದಾಗಲೇ ಆ ಉತ್ಸವದ ನೆನಪು ಎಂದು ವಿರೂಪಾಕ್ಷನ ಗುಡಿಯಲ್ಲಿ ಸಭಾಮಂಟಪವನ್ನೂ ಗೋಪುರಗಳನ್ನೂ ಕಟ್ಟಿಸಿದನು. ಪೂರ್ವದಿಗ್ಯಾತ್ರೆಯಿಂದ ಬಂದ ಮೇಲೆ ಕಟ್ಟಿಸಿದ ಕೃಷ್ಣ ಸ್ವಾಮಿಯ ಮಂದಿರದ ಸಂಗತಿಯಂತೂ ಗೊತ್ತೇ ಇದೆ. ವಿಜಯನಗರದಲ್ಲಿ ಈಗಲೂ ಕಲಾಕುಸುರಿನ ಕೆಲಸದಲ್ಲಿ ಪ್ರಸಿದ್ಧಿಪಡೆದ ವಿಜಯ ವಿಟ್ಠಲನ ಗುಡಿಯೂ ಹಜಾರರಾಮನ ಗುಡಿಯೂ ಇವನ ಕಾಲದಲ್ಲಿಯೇ ಪ್ರಾರಂಭಿಸಲ್ಪಟ್ಟುವು. ವಿಜಯವಿಟ್ಠಲನ ಗುಡಿಯ ಕೆಲಸವಂತೂ ಮುಂದೆ ೪೫ ವರ್ಷಗಳ ವರೆಗೆ ನಡೆದು ತಾಳೀಕೋಟೆಯ ಕದನದಲ್ಲಾದ ವಿಜಯನಗರದ ಪತನದಿಂದ ಅರ್ಧಕ್ಕೆಯೆ ನಿಂತು ಬಿಟ್ಟಿತು. ಇದೀಗ ಪಂಪಾಕ್ಷೇತ್ರದಲ್ಲಿ

ತನ್ನ ಉಗ್ರತೆಯಿಂದ ಪ್ರಸಿದ್ಧಿಪಡೆದ ಉಗ್ರನರಸಿಂಹನೂ ಈ ಕೃಷ್ಣ ದೇವರಾಯನಿಂದಲೇ ಪ್ರತಿಷ್ಠಿತಲ್ಪಟ್ಟವನು. ಪಟ್ಟಣದ ನೆರೆಯಲ್ಲಿಯೇ ತನ್ನ ಪ್ರೀತಿಯತಾಯಿಯ ನೆನಹಿಗಾಗಿ ನಾಗಲಾಪುರವೆಂಬ ಪಟ್ಟಣ ವನ್ನು ಕಟ್ಟಿಸಿ ಭವ್ಯವಾದ ಮಂದಿರಗಳಿಂದದನ್ನು ಸಿಂಗರಿಸಿ ಅಲ್ಲಿಯೇ ವಾಸಮಾಡಿಕೊಂಡಿರ ತೊಡಗಿದನು. * ಇಂತು ಸಾಮ್ರಾಜ್ಯವೂ ರಾಜ ಧಾನಿಯೂ ಕೂಡಿಯೇ ವಿಸ್ತಾರಪಡೆದುವೀತನ ಕಾಲದಲ್ಲಿ!

ಒಕ್ಕಲತನ ವ್ಯಾಪಾರ ಶಿಲ್ಪಕಲೆ ಮೊದಲಾದುವು ಏಳ್ಗೆಪಡೆದಂ ತೆಯೇ ಸಾಹಿತ್ಯವೂ ಏಳ್ಗೆಪಡೆಯಿತೀ ಕೃಷ್ಣರಾಯನ ಕಾಲದಲ್ಲಿ. ಅವನು ಸ್ವಯಂ ಕವಿಯಾಗಿದ್ದನು. ಅಲ್ಲದೆ ಕವಿಜನಕ್ಕಾಶ್ರಯನಾಗಿ ದ್ದನು. ಇವನು ಸಂಸ್ಕೃತದಲ್ಲಿ ಬರೆದ ಜಾಂಬವತಿ ಕಲ್ಯಾಣವೂ ತೆಲು ಗಿನಲ್ಲಿ ಬರೆದ ಆಮುಕ್ತಮಾಲ್ಯದವೂ ಅವನ ಕವಿತಾಪ್ರೌಢಿ ಯನ್ನು ಈಗಲೂ ತೋರಿಸುತ್ತಿರುವುವು. ಇವನ ಆಸ್ಥಾನದಲ್ಲಿ ಅನೇಕ ಕನ್ನಡ ತೆಲುಗು ಸಂಸ್ಕೃತ ಭಾಷೆಗಳ ಕವಿಗಳಿದ್ದರು. ತೆಲುಗು ಕವಿ ಗಳಂತೂ ಆಂಧ್ರಭೋಜನೆಂದು ಕರೆದಿರುವರೀತನನ್ನು. ಇವನಾಸ್ಥಾನ ದಲ್ಲಿದ್ದ ವಿನೋದಗಾರನಾದ ತೆನ್ನಾಲ ರಾಮಕೃಷ್ಣನ ಹೆಸರನ್ನಂತೂ ಅರಿಯದವರೇ ಇಲ್ಲ. ಸಾಹಿತಿಗಳು, ಶಿಲ್ಪಿಗಳು, ಚಿತ್ರಕಾರರು, ಸಂಗೀತ ಕಾರರು ಎಲ್ಲರೂ ಕೃಷ್ಣ ದೇವರಾಯನೆಂದರೆ ತಮ್ಮ ತಮ್ಮ ವಿದ್ಯಾ ಭಿಮಾನಿ ದೇವತೆಯೆಂದೇ ತಿಳಿಯುತಿದ್ದರೆಂದು ಹೇಳಬೇಕು.

---

* ಈ ಹೊಸಪಟ್ಟಣವನ್ನು ತನ್ನ ಪ್ರೀತಿಯ ರಾಣಿಯ ಸಲುವಾಗಿ ಕಟ್ಟಿಸಿದನೆಂದು ಕೆಲವು ಇತಿಹಾಸಗಳಲ್ಲಿ ಉಕ್ತವಾಗಿದೆ. ಅವನಿಗೆ ಈ ಹೆಸ ರಿನ ರಾಣಿಯಿದ್ದಳೆಂದು ಎಲ್ಲಿಯೂ ಉಕ್ತವಾಗಿಲ್ಲ. ನಾಗಮ್ಮಾಜಿ (ನಾಗಲಾದೇವಿ) ಈತನ ತಾಯಿ. ಅವಳ ನೆನಹಿಗಾಗಿಯೇ ಈ ಪಟ್ಟಣವನ್ನು ಕಟ್ಟಿಸಿರುವನೆಂದು ಹೇಳಿದುದು ತಪ್ಪಾಗಲಿಕ್ಕಿಲ್ಲವೆಂದು ತೋರುತ್ತದೆ.

ಕೃಷ್ಣದೇವರಾಯನಿಗೆ ಸಾಳುವ ತಿಮ್ಮರಸನು ಮುಖ್ಯಮಂತ್ರಿಯಾಗಿದ್ದನು. ಹೊಸಲೆಯ ಮಠದ ಶ್ರೀ ವ್ಯಾಸರಾಯರೆಂಬ ಮಾಧ್ವಸ್ವಾಮಿಗಳು ರಾಜಗುರುಗಳಾಗಿದ್ದರು. ಇವರಿಬ್ಬರ ಮೇಲೆಯೂ ರಾಯನ ಪ್ರೀತಿ ಬಹಳ ಇದ್ದಿತು. ತಿಮ್ಮರಸನನ್ನಂತೂ ರಾಯನು ಅಪ್ಪಾಜಿ ಎಂದು ಕರೆಯುತಿದ್ದನು. ಅವನು ಹೇಳಿದುದೇ ಪೂರ್ವದಿಶೆ; ಇಷ್ಟು ಮನ್ನಿಸುತಿದ್ದನು ರಾಯನಾತನನ್ನು. ಹರಿಹರನಿಗೆ ವಿದ್ಯಾರಣ್ಯರು ಹೇಗೆ ಗುರುಗಳಾಗಿದ್ದರೊ ಹಾಗೆಯೆ ಇವನಿಗೆ ವ್ಯಾಸರಾಯರು ಗುರುಗಳಾಗಿ ಇವನ ಕಲ್ಯಾಣವನ್ನು ಬಯಸುತಿದ್ದರು. ಅದೊಮ್ಮೆ ಕೃಷ್ಣದೇವರಾಯನ ಕುಯೋಗ ಕಾಲದಲ್ಲಿ ಇವರು ಸ್ವತಃ ಸಿಂಹಾಸನವನ್ನೇರಿದರು. ರಾಯನು ಮುತ್ತು ರತ್ನಗಳಿಂದಭಿಷೇಕಮಾಡಿದನು. ಇಂತು ರಾಯನು ಮುಖ್ಯಮಂತ್ರಿಯಾದ ಸಾಳುವ ತಿಮ್ಮರಸನನ್ನೂ ವ್ಯಾಸ ರಾಯರನ್ನೂ ಹೇಗೆ ಮನ್ನಿಸುತಿದ್ದನೋ ಹಾಗೆ ಅವರೂ ಈತನ ಕಲ್ಯಾಣೇಚ್ಛೆಯನ್ನು ಮಾಡುತಿದ್ದರು. ಆದರೆ ಕೊನೆಕೊನೆಗೆ ಸಾಳುವ ತಿಮ್ಮರಸನ ವಿಷಯದಲ್ಲಿ ರಾಯನಿಗೆ ಶಂಕೆಕುಶಂಕೆಗಳು ತೋರತೊಡಗಿದುವು. ರಾಯಚೂರಿನಿಂದ ತಿರುಗಿ ಬಂದ ಮೇಲೆ ತಾನು ರೋಗಪೀಡಿತನಾದುದರಿಂದ ತನ್ನ ಚಿಕ್ಕ ವಯಸ್ಸಿನ ಮಗನಾದ ತಿರುಮಲನನ್ನು ಪಟ್ಟಕ್ಕೆ ಕುಳ್ಳಿರಿಸಿ ಅವನ ಹೆಸರಿನಿಂದ ರಾಜ್ಯಕಾರಭಾರ ಸಾಗಿಸುತಿದ್ದನು. ಆದರೆ ಆ ಬಾಲಕನು ವಿಷಪ್ರಯೋಗದಿಂದ ತೀರಿದನು. ತನ್ನ ಮಂತ್ರಿಯಾದ ಸಾಳುವ ತಿಮ್ಮರಸನು ವಿಷಪ್ರಯೋಗ ಮಾಡಿರಬೇಕೆಂದೂ ಸಂಶಯವು ಬಾಧಿಸತೊಡಗಿತು ರಾಯನನ್ನು. ಅದಕಾಗಿ ಅವನನ್ನೂ ಅವನ ಬಂಧುಬಳಗದವರನ್ನೂ ಸೆರೆಯಲ್ಲಿಟ್ಟನು. ಅವರಲ್ಲಿ ತಿಮ್ಮರಸನ ಮಗನೊಬ್ಬನು ತಪ್ಪಿಸಿಕೊಂಡು ಓಡಿಹೋಗಿ ಗೊಂಡೂರ ಬಳಿ ಗುಹೆ ದಲ್ಲಡಗಿಕೊಂಡನು.

ರಾಯನಿಗೆ ತಿಳಿಯಿತೀ ವರ್ತಮಾನ. ಆಗಲೇ ರಾಯನು ತಿಮ್ಮರಸ ನನ್ನೂ ಅವನ ಮಗನನ್ನೂ ತರಿಸಿ ಕಣ್ಣು ಕೀಳಿಸಿದನೆಂದು ಹೇಳು ತ್ತಾರೆ. ಅದು ಹೇಗಿದ್ದರೂ ಅಂತ್ಯಕಾಲದಲ್ಲಿ ತಿಮ್ಮರಸನ ಮೇಲೆ ರಾಯನ ವಿಶ್ವಾಸವಿದ್ದಿಲ್ಲವೆಂಬುದೇನೋ ನಿಜವಾಗಿರಬೇಕು.

"ಕನ್ನಡ ರಾಜ್ಯ ರಮಾರಮಣ" "ಮೂರುರಾಯರ ಗಂಡ" ಎಂಬ ಬಿರುದುಗಳಿದ್ದವೀರಾಯನಿಗೆ. ತನ್ನ ಕಾಲದಲ್ಲಿ ಪ್ರಸಿದ್ಧಿ ಪಡೆದ ಮೂವರು ರಾಜರನ್ನು ಸೋಲಿಸಿದುದರಿಂದ ಮೂರುರಾಯರ ಗಂಡನೆಂಬ ಬಿರುದು ಬಂದಿದ್ದಿತು. ಕೆಲವರು ಆಂಧ್ರರು ಕೃಷ್ಣರಾಯ ನಿಗೆ ತಮ್ಮ ಕವಿಗಳು ಕೊಟ್ಟ ಆಂಧ್ರಭೋಜನೆಂಬ ಬಿರುದೊಂ ದನ್ನು ನೋಡಿ ವಿಜಯನಗರವು ಆಂಧ್ರ ರಾಜ್ಯವೆಂದೂ ಕೃಷ್ಣದೇವ ರಾಯನು ಆಂಧ್ರರಾಜನೆಂದೂ ಪ್ರತಿಪಾದಿಸಿರುವರು. ಕೃಷ್ಣರಾಯನಿ ಗಿರುವ ಈ ಎರಡು ಬಿರುದುಗಳೇ ಅವನು ಕನ್ನಡರಾಯನೆಂದು ಸಾರುವುದಿಲ್ಲವೆ?

೧೫೨೦ ರಲ್ಲಿ ಪೋರ್ಚುಗೀಜ ಪ್ರವಾಸಿಯಾದ ಪೀಜನು ಈ ಕೃಷ್ಣದೇವರಾಯನನ್ನು ಕಂಡಿದ್ದನು. ಅವನು ಬರೆದ ವರ್ಣನೆಯಿಂದ ರಾಯನ ಸ್ವಭಾವ ಸ್ವರೂಪ ದಿನಚರ್ಯೆಗಳ ಕಲ್ಪನೆಯಾಗುವಂತಿದೆ. ಅವನು ಬರೆದುದೇನೆಂದರೆ—ಅರಸನ ಎತ್ತರವು ಮಧ್ಯಮವಾಗಿದ್ದು ಶರೀರವು ಸುದೃಢವಾಗಿಯೂ ಹುರಿಕಟ್ಟಾಗಿಯೂ ಇದೆ. ಗೌರವರ್ಣ ದಾತನದು. ಮೋರೆಯ ಮೇಲೆ ಮೈಲಿಯ ಕಲೆಗಳಿರುತ್ತವೆ. ಅವನು ಒಳ್ಳೇ ವರ್ಚಸ್ವಿಯಾಗಿದ್ದು ಸಕಲಸದ್ಗುಣ ಸಂಪನ್ನನಿರು ವನು. ಆನಂದವೃತ್ತಿಯವನದು. ಆವಾಗಲೂ ನಗೆಮಲ್ಲಿಗೆಯು ಅರಳಿರುವುದು. ಸರ್ವವಿಧದಲ್ಲಿಯೂ ಪರಿಪೂರ್ಣನಾದ ಇವ ನಂತಹ ಅರಸು ಜಗದಲ್ಲಿ ಕಾಣಿಸಿಗುವುದು ಅಪರೂಪ. ಪರದ್ವೇಷಸ್ಪರ



“ಕನ್ನಡ ರಾಜ್ಯರಮಾರಮಣ”ನ ಕುಯೋಗನಿವಾರಣೆ.

ಮೇಲೆ ಅವನ ಪ್ರೇಮ ಬಹಳ. ಪ್ರೇಮಪೂರ್ವಕವಾಗಿ ಅವರನ್ನು ಕಾಣುವನು. ಯೋಗ್ಯರೀತಿಯಿಂದವರನ್ನು ಸನ್ಮಾನಿಸುವನು. ನ್ಯಾಯ ಪಕ್ಷಪಾತಿಯಾಗಿರುವನೀ ಸಾರ್ವಭೌಮ. ಆದರೆ ಸಿಟ್ಟು ಬಂದಿತೊ ಯಾರನ್ನೂ ಕೇಳುವವನಲ್ಲ. ಈ ರಾಜನ ಪೂರ್ಣಹೆಸರು 'ಕೃಷ್ಣರಾಯ ಮಹಾಶಯ ಮಹಾರಾಜ ರಾಜರಾಜೇಶ್ವರ ಭಾರತಭೂಪಾಧಿರಾಜ ತ್ರಿಸಮುದ್ರಾಧಿಪತಿ ಭೂಮಂಡಲೇಶ್ವರ' ಎಂದಿದೆ. ಉಳಿದ ರಾಜರಿಗಿಂತ ಶ್ರೇಷ್ಠನಾಗಿದ್ದು ಅವನ ಆ ಶ್ರೇಷ್ಠತೆಗೆ ತಕ್ಕಂತೆ ಸೈನ್ಯವೂ ಅಧಿಕವಾಗಿದೆ. ಇವನ ರಾಜ್ಯದಷ್ಟು ವಿಸ್ತಾರವಾದ ರಾಜ್ಯವು ಮತ್ತೊಂದಿಲ್ಲ. ಇದರಿಂದಲೇ ಇವನಿಗೀಬಿರುದಾವಲಿಯು ಬಂದಿದೆ. ಹಾಗೆ ನೋಡಿದರೆ ಇವನಂತಹ ಶೂರವೀರ ಪುರುಷನಿಗೆ ಈ ಬಿರುದಾವಲಿಯು ಏನೂ ಅಲ್ಲವೆಂದು ಹೇಳಬೇಕು. ಇಷ್ಟು ಪರಿಪೂರ್ಣನಿರುವನವ.''

"ಈ ಅರಸು ಪ್ರತಿದಿವಸ ನಸುಕಿನಲ್ಲಿ ಬೇಗ ಏಳುವನು. ಮೈಗೆ ಎಣ್ಣೆ ತಿಕ್ಕಿಕೊಂಡು ಚಡ್ಡಿಯನ್ನು ಹಾಕಿ ಬಹುಭಾರವುಳ್ಳ ಮುದಗಲ್ಲು ತಿರುವುವನು. ಬೆವರುಬಿಟ್ಟು ಎಣ್ಣೆಯೆಲ್ಲವೂ ತೊಳೆದು ಹೋಗುವವರೆಗೆ ಕತ್ತಿ ಭಾಲೆಗಳನ್ನು ತಿರುವುವನು. ತನ್ನ ಆಶ್ರಯದಲ್ಲಿದ್ದ ಜಟ್ಟಿಗಳ ಕೂಡ ಮಲ್ಲಯುದ್ಧಮಾಡುವನು. ಇದಾದಮೇಲೆ ಅರುಣೋದಯವಾಗುವವರೆಗೆ ಕುದುರೆಯ ಸವಾರಿ ಮಾಡುವನು. ಅವನ ಈ ವ್ಯಾಯಾಮವೆಲ್ಲವೂ ಸೂರ್ಯೋದಯಕ್ಕೆ ಪೂರ್ವದಲ್ಲಿಯೇ ಪೂರ್ಣವಾಗುವುದು. ಆ ಮೇಲೆ ಸ್ನಾನಗೃಹಕ್ಕೆ ಹೋಗಿ ಸ್ನಾನಮಾಡಿ ದೇವತಾಗೃಹವನ್ನು ಪ್ರವೇಶಿಸುವನು. ನಿತ್ಯನಿಯಮದಂತೆ ಪೂಜಾಪಾಠಗಳು ಮುಗಿದ ಮೇಲೆ ಓಲಗದ ಚಾವಡಿಗೆ ಬಂದು ರಾಜ್ಯಕಾರ್ಯಕುಶಲರಾದ ಮಂತ್ರಿಸೇನಾಪತಿಗಳೊಡನೆ ರಾಜ್ಯಕಾರ್ಯದಲ್ಲಿ ಮಗ್ನ

ನಾಗುವನು.''

ಕೃಷ್ಣರಾಯನಿಗೆ ತಿರುಮಲಾಂಬೆಯೆಂಬ ಮಗಳಿದ್ದಳು. ಅವಳನ್ನು ಅರವೀಡುವಂಶದ ರಾಮರಾಯನಿಗೆ ಕೊಟ್ಟಿದ್ದಿತು. ಇನ್ನೊಬ್ಬ ಮಗಳಾದ ವೆಂಗಲಾಂಬೆಯನ್ನು ಈ ರಾಮರಾಯನ ತಮ್ಮ ತಿರುಮಲರಾಯನಿಗೆ ಕೊಟ್ಟಿದ್ದಿತು ಅರಮನೆಯಲ್ಲಿ ರಾಮರಾಯನದೇ ವಿಶೇಷ ಪ್ರಸ್ಥ. ಅದರಿಂದ ಅಳಿಯರಾಮರಾಯನೆಂದೇ ಹೆಸರು ಬಿದ್ದಿತವನಿಗೆ. ಈ ರಾಮರಾಯನೂ ಅವನ ತಮ್ಮ ತಿರುಮಲರಾಯನೂ ಕೃಷ್ಣರಾಯನ ತರುವಾಯ ವಿಶೇಷ ಪ್ರಬಲರಾದರು. ರಾಮರಾಯನಂತೂ ವಿಜಯನಗರದ ರಾಜನೇ ಎನಿಸಿಕೊಂಡನು. ರಕ್ಕಸತಂಗಡಿಗಿಯ ಕಾಳಗದಲ್ಲಿ ಕೊಲೆಯಾದುದು ಈ ರಾಮರಾಯನದೇ. ಆಗಲೆ ವಿಜಯನಗರರಾಜ್ಯದ ಅಂತ್ಯವಾದುದು.

---

## ೯ ರಾಜಪ್ರತಿನಿಧಿಗಳ ಆಳಿಕೆ.

ಕೃಷ್ಣದೇವರಾಯನ ತರುವಾಯ ಅವನ ತಮ್ಮನಾದ ಅಚ್ಯುತ ರಾಯನು ಪಟ್ಟವೇರಿದನು. ಕೃಷ್ಣದೇವರಾಯನಷ್ಟು ಸಮರ್ಥನಲ್ಲನೀತ. ಕೃಷ್ಣದೇವರಾಯನ ಮರಣಾನಂತರ ಆದಿಲಶಹನು ತಾನು ಪೂರ್ವ ದಲ್ಲಿ ಕಳೆದುಕೊಂಡ ರಾಯಚೂರು ಮುದಗಲ್ಲುಕೋಟೆಗಳನ್ನು ತಿರುಗಿ ಸಂಪಾದಿಸಲುಜ್ಜುಗಿಸಿ ಅವರಲ್ಲಿ ಯಶಪಡೆದನು. ಅಷ್ಟಕ್ಕೆಯೆ ಬಿಡ ಲಿಲ್ಲನಾತ. ವಿಜಯನಗರದ ಮೇಲೆಯೂ ಸಾಗಿಬಂದನು. ಯುದ್ಧ ವೆಂದರೆ ಅಚ್ಯುತರಾಯನಿಗಾಗದು. ಆಗ ಅವನು ಆದಿಲಶಹನಿಗೆ ವಿಪುಲವಾಗಿ ಹಣಕೊಟ್ಟು ತಿರುಗಿಕಳಿಸಿದನು. ಪ್ರಜೆಗಳಿಗಿದು ಸಹನೆ ಯಾಗದೆಹೋಯಿತು. ಆದರೆ ರಾಜಮನೆತನದಲ್ಲಿರುವ ಅಭಿಮಾನದಿಂ ದವರು ಸುಮ್ಮನಿದ್ದರು.

ಅಚ್ಯುತರಾಯನು ೧೨ ವರ್ಷ ರಾಜ್ಯವಾಳಿ ಮರಣಹೊಂದಲು ಅವನ ಮಗನಾದ ವೆಂಕಟದೇವರಾಯನು ಪಟ್ಟಕ್ಕೆ ಕುಳಿತನು. (೧೫೪೨) ಯುವರಾಜನಿದ್ದಾಗಲೇ ತನ್ನ ಗುಣಸ್ವಭಾವವರ್ತನಗಳಿಂದ ಪ್ರಜೆಗಳೆಲ್ಲರ ಪ್ರೀತಿಯನ್ನು ಸಂಪಾದಿಸಿದ್ದನೀತ. ಆದರೆ ಅಚ್ಯುತ ರಾಯನ ಮರಣಕಾಲದಲ್ಲಿ ಇನ್ನೂ ಎಳೆಯನಾಗಿದ್ದನು. ಅದರಿಂದ ಮಂತ್ರಿಯಾದ ಸಾಳುಕತಿಮ್ಮನು ತಾನೇ ಪ್ರಬಲನಾಗಿ ಸರ್ವಾಧಿಕಾರ ವನ್ನು ಸಾಗಿಸತೊಡಗಿದನು. ಆತನೊಳ್ಳೇ ಮಹತ್ವಾಕಾಂಕ್ಷಿ. ತನ್ನ ಪ್ರಸ್ಥವನ್ನು ಬೆಳಿಸಿಕೊಳ್ಳುವುದಕ್ಕಾಗಿ ಅಲ್ಲದಸಲ್ಲದ ಕೃತ್ಯಗಳನ್ನು ಮಾಡತೊಡಗಿನು. ರಾಜ್ಯದೊಳಗಿನ ಸರದಾರರು ಮಾಂಡಲಿಕರು ಅವನ ವಿರುದ್ಧವಾಗಿ ಗುಣಗುಟ್ಟತೊಡಗಿದರು. ಆದಾಗ ಸಾಳುಕನು ದರಬಾರದ ನೆವದಿಂದ ಸರದಾರಸಾಮಂತರನ್ನು ಕರೆಸಿಕೊಂಡು

ಅವರಲ್ಲಿಯ ಕೆಲವರನ್ನು ಅವಮಾನಪಡಿಸಿದನು. ಕೆಲವರ ಕಣ್ಣು ಕಿತ್ತಿಸಿದನು. ಅವನಾಡಳಿತಕ್ಕೆ ಬೇಸತ್ತು ಸರದಾರ ಸಾಮಂತರು ರಾಜ್ಯವನ್ನು ಬಿಟ್ಟು ಬೇರೆಕಡೆಗೆ ಹೋಗಿ ಅವನ ವಿರುದ್ಧವಾಗಿ ಸಂಚು ನಡಿಸಿದರು. ಇಂತಹರಲ್ಲಿ ಕೃಷ್ಣದೇವರಾಯನ ಅಳಿಯ ರಾಮರಾಯ ತಿರುಮಲರಾಯರು ಪ್ರಮುಖರು. ಇವರು ಗುತ್ತಿಪೆನುಗುಂಡೆಗಳ ಕಡೆಗೆ ಓಡಿಹೋಗಿ ಅಲ್ಲಿ ಸೈನ್ಯವನ್ನು ಸಿದ್ಧಪಡಿಸತೊಡಗಿದರು.

ಈ ಸಾಳುಕತಿಮ್ಮನ ಕಾರುಬಾರಕ್ಕೆ ಬೇಸತ್ತು ರಾಣಿಯು ವಿಜಾಪುರದ ಆದಿಲಶಹನಿಗೆ ಸಹಾಯಕ್ಕೆ ಬರಬೇಕೆಂದು ಹೇಳಿಕಳುಹಿದಳು. ಅದನ್ನು ತಿಳಿದ ಸಾಳುಕನು ಮೊದಲೇ ಆದಿಲಶಹನಿಗೆ ವಿಪುಲವಾದ ಹಣವನ್ನು ಕೊಟ್ಟು ವಿಜಯನಗರಕ್ಕೆ ಬರದಂತೆ ವ್ಯವಸ್ಥೆ ಮಾಡಿದನು. ರಾಮರಾಯತಿರುಮಲರಾಯರು ಉಳಿದ ಸರದಾರರನ್ನೊಡಗೊಂಡು ಸಾಳುಕನನ್ನು ಹೊಡೆದೋಡಿಸುವುದಕ್ಕೆಂದು ವಿಜಯನಗರದ ಮೇಲೆ ಸಾಗಿಬಂದರು. ಈ ಹೊಸ ಸೈನ್ಯದ ಮುಂದೆ ಸಾಳುಕನ ಆಟವು ನಡೆಯಲಿಲ್ಲ. ಆದರಿಂದವನು ರೊಚ್ಚಿಗೆದ್ದು ಅರಮನೆಯನ್ನು ಹೊಕ್ಕು ವೆಂಕಟದೇವರಾಯನನ್ನೂ ಅಚ್ಯುತರಾಯನ ತಮ್ಮ ರಂಗರಾಯನನ್ನೂ ಕೊಂದುಹಾಕಿದನು. ಇದರಿಂದಂತು ಪ್ರಜೆಗಳೂ ರಾಮರಾಯನ ಸೈನಿಕರೂ ಮತ್ತಷ್ಟು ರೇಗಿದರು. ಸಾಳುಕತಿಮ್ಮನು ಸೋತು ಓಡಿಹೋದನು. ರಾಮರಾಯನು ರಂಗರಾಯನ ಮಗನಾದ ಸದಾಶಿವರಾಯನನ್ನು ಪಟ್ಟಕ್ಕೆ ಕುಳ್ಳಿರಿಸಿ ಕಾರುಬಾರವನ್ನು ಸಾಗಿಸತೊಡಗಿದನು. ಸದಾಶಿವರಾಯನು ಆಗ ತೀರ ಚಿಕ್ಕವ. ಆಡಳಿತದ ಕಾರ್ಯವೆಲ್ಲವನ್ನು ರಾಮರಾಯನೇ ನೋಡಿಕೊಳ್ಳುತ್ತಿದ್ದನು. ತನ್ನ ತಮ್ಮಂದಿರಾದ ವೆಂಕಟಾದ್ರಿತಿರುಮಲರಾಯರನ್ನು ಒಂದೊಂದು ಸೀಮೆಗೆ ಸರ್ವಾಧಿಕಾರಿಗಳನ್ನಾಗಿ ನಿಯಮಿಸಿದನು. ಮೊದಲುಮೊದಲು

ಸದಾಶಿವರಾಯನೇ ಅರಸೆಂದೂ ತಾನೊಬ್ಬ ಮಹಾಮಂಡಲೇಶ್ವರನೆಂದೂ ಹೇಳಿಕೊಳ್ಳುತಿದ್ದನು. ಕೆಲವು ದಿವಸಗಳ ಮೇಲೆ ರಾಜಪ್ರತಿನಿಧಿಯೆನಿಸಿಕೊಂಡು ಕಾರುಬಾರ ಸಾಗಿಸಿದನು. ಆದಾಗ ಸದಾಶಿವರಾಯನಿಗೆ ರಾಜನಿಗೆ ಸಲ್ಲತಕ್ಕ ಮಾನಮರ್ಯಾದೆಗಳೆಲ್ಲವನ್ನೂ ಸಲ್ಲಿಸುತಿದ್ದನು. ಹೀಗೆಯೂ ಕೆಲದಿವಸಗಳು ಹೋದುವು. ಆಡಳಿತವು ಪೂರ್ಣವಾಗಿ ರಾಮರಾಯನ ಕೈವಶವಾಯಿತು. ಇಷ್ಟರಲ್ಲಿ ಸದಾಶಿವರಾಯನು ತಾನೇ ರಾಜ್ಯಭಾರವನ್ನು ನಡಿಸುವ ವಯಸ್ಸಿಗೆ ಬಂದನು. ಆಡಳಿತದ ಸವಿಯುಂಡ ರಾಮರಾಯನಿಗೆ ರಾಜ್ಯಭಾರವನ್ನೊಪ್ಪಿಸುವ ಮನಸಾದರೂ ಹೇಗಾಗಬೇಕು ? ಅರಮನೆಯಲ್ಲಿಯೇ ಸದಾಶಿವರಾಯನನ್ನು ಪ್ರತಿಬಂಧದಲ್ಲಿರಿಸಿದನು. ವರುಷಕ್ಕೊಂದು ದಿನ ಮಾತ್ರ ಪ್ರಜೆಗಳಿಗೆ ಅರಸನ ದರುಶನಮಾಡಿಸುತಿದ್ದನು. ಈ ರೀತಿಯು ಕೆಲ ಸರದಾರರಿಗೆ ಸೇರಲಿಲ್ಲ. ಅವರಾಗ ಬೇರೊಬ್ಬ ಮಂತ್ರಿಯನ್ನು ನಿಯಮಿಸುವ ಹಟಹಿಡಿದರು. ರಾಮರಾಯನು ಅವರಮಾತಿಗೆ ಒಪ್ಪಿದಂತೆ ಮಾಡಿ ಅದರ ವಿಚಾರಕ್ಕೆಂದೇ ಅರಮನೆಯಲ್ಲವರನ್ನು ಕರೆಸಿಕೊಂಡು ಕೆಲವರ ತಲೆಹೊಡೆಯಿಸಿದನು. ಕೆಲವರ ಕಣ್ಣು ಕೀಳಿಸಿದನು. ಅಂತೂ ಇಂತೂ ಎಲ್ಲರಿಗೂ ಒಂದಿಲ್ಲೊಂದು ಬಗೆಯ ಶಾಸನವಾಯಿತು. ಹೀಗೆ ತನ್ನವಿರುದ್ಧ ಜನ್ಮತಾಳಲಿದ್ದ ಪಕ್ಷವನ್ನು ಮೂಲದಲ್ಲಿಯೆ ಕಡಿದು ಹಾಕಿದ ಮೇಲಂತೂ ವರುಷಕ್ಕೊಂದು ದಿವಸವಾದರೂ ಪ್ರಜೆಗಳಿಗಾಗುತಿದ್ದ ಸದಾಶಿವರಾಯನ ದರುಶನವು ನಿಂತುಹೋಯಿತು. ರಾಜಬಿರುದುಗಳನೆಲ್ಲ ತಾನೇ ಧರಿಸಿಕೊಂಡು ರಾಮರಾಯನು ಅರಸನೆನಿಸಿಕೊಳ್ಳತೊಡಗಿದನು. ಅವನೂ ಅರಸುಮನೆತನಕ್ಕೆ ಸಂಬಂಧಿಸಿದವನೆ. ಅದರಲ್ಲಿ ಸಾಹಸಿಗಳಾದ ತಿರುಮಲರಾಯ ವೆಂಕಟಾದ್ರಿಗಳೆಂಬ ಭೀಮಾರ್ಜುನರ ಸಹಾಯಬೇರೆ. ಅದರಿಂದ ಪ್ರಜೆಗಳೆಲ್ಲರು ಮಿಟ್ಟುಮಿಸುಕದೆ ಸುಮ್ಮನಾದರು.

---

# ೧೦ ರಾಕ್ಷಸ ತಂಗಡಿಗಿಯು ಕಾಳಗ.*

ರಾಜ್ಯಕಾರಭಾರವು ರಾಮರಾಯನ ಕೈಸೇರಿದುದರಿಂದ ಸಾಮ್ರಾಜ್ಯಕ್ಕೆ ಮತ್ತೆ ಕಳೆಯೇರಿತು. ಕೃಷ್ಣಾನದಿಯು ದಕ್ಷಿಣಕ್ಕೆ ಕನ್ಯಾಕುಮಾರಿಯುವರೆಗಿನ ಸೀಮೆಯಲ್ಲೆಲ್ಲ ರಾಮರಾಯನ ವರ್ಚಸ್ಸು ಚೆನ್ನಾಗಿಯೇ ಕುಳಿತಿತು. ಇಷ್ಟೇಅಲ್ಲ ಅದರಾಚೆಯ ಲಂಕೆಯೂ ಸಾಮ್ರಾಜ್ಯಕ್ಕಾಧೀನವಾಯಿತು. ಸಾಮ್ರಾಜ್ಯದ ಬೆಳವಣಿಗೆಯ ದೃಷ್ಟಿಯಿಂದ ಹುಕ್ಕಬುಕ್ಕರು ಅಡಿಗಲ್ಲು ಹಾಕಿದರೆ ದೇವರಾಯನು ಕಟ್ಟಡವನ್ನು ಸಿದ್ಧಪಡಿಸಿದನು. ಕೃಷ್ಣದೇವರಾಯನು ಶಿಖರವನ್ನು ಕಟ್ಟಿಸಿದರೆ ರಾಮರಾಯನು ಅದರಮೇಲೆ ಕಳಸವನ್ನಿಟ್ಟನು. ಕೃಷ್ಣಾನದಿಯ ಉತ್ತರಕ್ಕಿರುವ ಐವರು ಮುಸಲ್ಮಾನ ಸುಲ್ತಾನರನ್ನೂ ರಾಮರಾಯನು ಹಣ್ಣಿಗೆ ತಂದನು. ಅವರನ್ನು ಹಣ್ಣಿಗೆ ತರುವಲ್ಲಿ ರಾಮರಾಯನು ಒಂದು ಯೋಜನೆಯನ್ನೇ ಮಾಡಿದ್ದನೆಂದು ಹೇಳಬಹುದು. ಬಾಮನೀ ರಾಜ್ಯದಿಂದುಂಟಾದ ಆ ಐದು ರಾಜ್ಯಗಳಲ್ಲಿ ಯಾವಾಗಲೂ ತಾಳಮೇಳವಿರಲಿಲ್ಲ. ರಾಮರಾಯನು ಒಮ್ಮೆ ಅಹಮ್ಮದನಗರದ ನಿಜಾಮಶಹನ ಕಡೆಗಾಗಿ ಆದಿಲಶಹನನ್ನು ಹಣಿಯುವನು. ಮತ್ತೊಮ್ಮೆ ಬೀದರದವನ

---

* ಈ ರಾಕ್ಷಸ ತಂಗಡಿಗಿಯು ಕಾಳಗಗಕ್ಕೆ ‚‚ತಾಳೀಕೋಟೆಯ ಕಾಳಗ'' ಎಂಡು ತಪ್ಪು ಹೆಸರು ಬಿದ್ದಿದೆ. ತಾಳೀಕೋಟೆಯ ದಕ್ಷಿಣಕ್ಕೆ ೨೫ ಮೈಲಿನ ಮೇಲೆ ರಾಕ್ಷಸ ತಂಗಡಗಿ—ನಾಲತವಾಡಗಳ ಮಧ್ಯದಲ್ಲಿರುವ ಬೈಲಿನಲ್ಲಿ ಈ ಯುದ್ಧವಾಯಿತೆಂದು ‛ರಾಮರಾಯನ ಬಖೈರು' ಎಂಬ ಪುಸ್ತಕದಲ್ಲಿ ಬರೆದಿದೆ. ಈ ಊರುಗಳು ವಿಜಾಪೂರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನಲ್ಲಿ ಕೃಷ್ಣಾನದಿಯ ಉತ್ತರ ದಂಡೆಯಮೇಲೆ ಇವೆ. ತಂಗಡಿಗಿಯ ಬೈಲಿನಲ್ಲಿ ಈ ಯುದ್ಧದ ಎರಡು ರಣಸ್ತಂಭಗಳನ್ನು ಈಗಲೂ ನೋಡಬಹುದು.

ಕಡೆಗಾಗುವನು. ಅಂತೂ ಆ ಐವರು ಸುಲ್ತಾನರನ್ನೂ ಹಣ್ಣುಮಾಡಿದನು. ಆವರೆಲ್ಲರೂ ರಾಮರಾಯನಿಗೆ ಹೆದರಿ ನಡೆಯತೊಡಗಿದರು. ರಾಮರಾಯನನ್ನು ಎದುರಿಸುವವರೇ ಇಲ್ಲದಾಯಿತು. ಆದಾಗ ರಾಯನು ಮುಸಲ್ಮಾನ ಸುಲ್ತಾನರಗೂಡ ಉನ್ಮತ್ತನಾಗಿ ನಡೆಯತೊಡಗಿದನು. ತನ್ನ ವರ್ತನದಿಂದ ಆವರಿಗೆ ಅಪಮಾನವಾಗಬಹುದೆಂಬುದನ್ನೂ ಲೆಕ್ಕಿಸಲಿಲ್ಲ. ಇವನ ಈ ವರ್ತನದಿಂದ ದಕ್ಷಿಣದಲ್ಲಿ ತಮ್ಮ ರಾಜ್ಯಗಳಿನ್ನು ಉಳಿಯುವುವೊ ಇಲ್ಲವೊ ಎಂದೆನಿಸಿತು ಸುಲ್ತಾನರಿಗೆ. ಪ್ರತಿಯೊಬ್ಬರೂ ಮುಂದೇನು ಎಂದು ಚಿಂತಿಸತೊಡಗಿದರು. ತಾವೆಲ್ಲರು ಒಂದಾಗಿ ರಾಮರಾಯನನ್ನು ಎದುರಿಸದೆ ಗತ್ಯಂತರವಿಲ್ಲವೆಂದೆನಿಸಿತವರಿಗೆ. ಇದಕ್ಕಾಗಿ ಅವರು ತಮ್ಮತಮ್ಮೊಳಗಿನ ಜಗಳಗಳನ್ನು ಮರೆಯಲೇ ಬೇಕಾಯಿತು. ಇಷ್ಟೇ ಅಲ್ಲ; ತಮ್ಮೊಳಗೆ ಪರಸ್ಪರ ಕಲಹವು ಎಂದಿಗೂ ಉಂಟಾಗದಂತೆ ಶರೀರಸಂಬಂಧವನ್ನು ಬೆಳಸಿದರು. ನಿಜಾಮಶಹನು ತನ್ನ ಮಗಳಾದ ಚಾಂದಬೀಬಿಯನ್ನು ಅಲ್ಲೀಆದಿಲಶಹನಿಗೆ ಕೊಟ್ಟು ಮೊದಲಿನಿಂದ ತಮಗೂ ಆದಿಲಶಹ ಮನೆತನಕ್ಕೂ ಜಗಳಕ್ಕೆ ಕಾರಣವಾದ ಸೊಲ್ಲಾಪುರದ ಕೋಟೆಯನ್ನು ವರದಕ್ಷಿಣೆಯಾಗಿ ಕೊಟ್ಟನು. ಇದಕ್ಕೆ ಪ್ರತಿಯಾಗಿ ವಿಜಾಪುರದ ಬಾದಶಹನು ತನ್ನ ತಂಗಿಯಾದ ಫಾಲಾಬೀಬಿಹಾದಿಯಾಸುಲ್ತಾನ ಎಂಬವಳನ್ನು ನಿಜಾಮಶಹನ ಹಿರಿಯ ಮಗನಿಗೆ ಕೊಟ್ಟು ಮದುವೆ ಮಾಡಿದನು. ನಿಜಾಮಶಹನು ತನ್ನ ಮತ್ತೊಬ್ಬ ಮಗಳನ್ನು ಕುತುಬಶಹನಿಗೆ ಕೊಟ್ಟನು. ಈ ಪ್ರಕಾರ ಮುಸಲ್ಮಾನ ರಾಜ್ಯಗಳ ಸಂಘವೊಂದು ಸ್ಥಾಪಿತವಾದಂತಾಯಿತು. ಅವರಾಗ ಒಳ್ಳೆಯ ಹುರುಪಿನಿಂದ ಯುದ್ಧದ ಸಾರಣೆ ನಡಿಸಿದರು. ಬೇದರದ ಸುಲ್ತಾನನಿಗೂ ನಿಜಾಮಶಹನಿಂದ ಯುದ್ಧದ ಆಮಂತ್ರಣ ಹೋಯಿತು. ಅವನೂ ಅದಕ್ಕೆ ಒಪ್ಪಿದನು.

ಮೊಗಲ ಬಾದಶಹನಾದ ಅಕಬರನನೂ ಇದರಲ್ಲಿ ಅಂಗವಿದ್ದಂತೆ ತೋರುವುದು. "ಮೊಗಲ ಬಾದಶಹನಾದ ಜಲಾಲುದ್ದೀನ ಅಕಬರನೂ, ನಿಜಾಮಶಹನೂ ಕುತುಬಶಹನೂ ಜಾಲನಾಪುರದಲ್ಲಿ ಕಲೆತು ಕರ್ನಾಟಕ ರಾಜ್ಯದಮೇಲೆ ದಂಡೆತ್ತಿಹೋಗುವುದನ್ನು ನಿಶ್ಚಯಿಸಿದರು." ಎಂದು ರಾಮರಾಯನ ಬಖರಿನಲ್ಲಿ ಹೇಳಿದೆ.

ಐವರು ಸುಲ್ತಾನರು ಒಂದಾಗಿ ವಿಜಯನಗರದ ಮೇಲೆ ಸಾಗಿ ಬರುವ ಸಿದ್ಧತೆಯನ್ನು ನಡೆಸಿರುವುದು ರಾಮರಾಯನಿಗೂ ಗೊತ್ತಾಯಿತು. ಯುದ್ಧವೆಂದರೆ ರಾಯನಿಗೆ ಒಳ್ಳೆ ಹುರುಪು. ಈ ಸಾರೆ ಐವರು ಸುಲ್ತಾನರೂ ಒಂದಾಗಿ ತನ್ನಮೇಲೆ ಸಾಗಿ ಬರುವದೆಂಬುದು ಬೇರೆ. ಆ ಐವರಿಗೂ ಒಮ್ಮೆಲೆ ತನ್ನ ಕೈಚಳಕವನ್ನು ತೋರಿಸುವ ಸಂಧಿ ದೊರೆಯಿತೆಂದು ರಾಯನು ಉಬ್ಬಿದನು. ಸಾಮಂತ ಸರದಾರರಿಗೆಲ್ಲ ಆಮಂತ್ರಣವಿತ್ತು ಕರೆಸಿಕೊಂಡು ಓಲಗ ನೆರೆಯಿಸಿದನು. ಮಧುರೆಯ ಕೃಷ್ಣಪ್ಪನಾಯಕನು ರಾಮರಾಯನ ಮಾಂಡಲಿಕನಾಗಿರದಿದ್ದರೂ ಅವನಿಗೂ ಆಮಂತ್ರಣವು ಹೋಗಿದ್ದಿತು. ಕಾರ್ಯದ ಮಹತ್ವವನ್ನರಿತು ಅವನೂ ತನ್ನ ಮುಖ್ಯಮಂತ್ರಿಯನ್ನೂ ಸೇನಾಪತಿಯನ್ನೂ ಕಳುಹಿದ್ದನು. ಓಲಗದಲ್ಲಿ ವಿಚಾರವಿನಿಮಯವಾಯಿತು. ಒಳ್ಳೆಯ ರಭಸದಿಂದ ಯುದ್ಧದ ಸಿದ್ಧತೆ ನಡೆಯಿತು.

ಯುದ್ಧದ ಸಿದ್ಧತೆಯಿರುವುದೆಂದು ತಿಳಿದಕೂಡಲೆ ವಿಜಾಪುರದ ಆದಿಲಶಹನು ಬಾಗಿಲಕೋಟೆ ರಾಯಚೂರು ಮುದಗಲ್ಲು ಮೊದಲಾದ ಕೋಟೆಗಳನ್ನು ತನಗೆ ಬಿಟ್ಟುಕೊಡುವುದಾಗಿ ರಾಮರಾಯನಿಗೆ ಪತ್ರ ಬರೆದನು. ವಿಜಯನಗರದವರಿಗೂ ಬಾಮನಿಯವರಿಗೂ ಮೊದಲಿನಿಂದ ವ್ಯಾಜ್ಯ ನಡೆದುದು ಈ ಕೋಟೆಗಳ ಸಲುವಾಗಿಯೆ. ಅದೇ ಈಗ ಸಹ ಕಾರಣವೆನಿಸಿಕೊಂಡಿತು. ಆ ಪತ್ರದ ಉದ್ದೇಶವು ರಾಮರಾಯನಿಗೆ

ತಿಳಿಯಿತು. ಯುದ್ಧಕ್ಕೆ ತಾನೂ ಸಿದ್ಧವಿರುವೆನೆಂಬುದನ್ನು ತೋರಿಸುವುದಕ್ಕಾಗಿಯೇ ಪತ್ರ ತಂದವನನ್ನು ಅವಮಾನಪಡಿಸಿ ಹೊರಪೂಡಿಸಿದನೆಂದು ಆಯಿತು; ಇಷ್ಟು ಕಾರಣವು ಮುಸಲ್ಮಾನರಿಗೆ ಸಾಕಾಯಿತು. ಮುಸಲ್ಮಾನರ ಸೈನ್ಯವು ವಿಜಯನಗರರಾಜ್ಯದ ಮೇಲೆ ಸಾಗಿಬಂದಿತು. ನಾಲತವಾಡದ ಹತ್ತರ ಪಾಳೆಯಹಾಕಿತು.

ರಾಮರಾಯನೂ ಸಜ್ಜಾಗಿ ತನ್ನ ಸಕಲ ಸೈನ್ಯದೊಡನೆ ರಾಕ್ಷಸ ತಂಗಡಗಿಯ ಬಳಿಯಲ್ಲಿರುವ ಬೈಲಿನಲ್ಲಿ ಬಂದಿಳಿದನು. ಅಲ್ಲಿ ರಣಘಂಟೆಗಳನ್ನು ಹೊಡಿಸಿ ರಣಸ್ತಂಭವನ್ನು ಕಟ್ಟಿಸಿದನು. ರಣಸ್ತಂಭದ ಬಳಿ ಸೈನ್ಯವು ಸಿದ್ಧವಾಯಿತು. ರಾಮರಾಯನೂ ಅವನ ತಮ್ಮಂದಿರೂ ಸೈನ್ಯದನಡುವೆ ವಿರಾಜಿಸುತಿದ್ದರು. ಅವನ ತಮ್ಮಂದಿರೇ ಸೇನಾಪತಿಗಳು. ಆ ಕಾಲಕ್ಕೆ ರಾಮರಾಯನ ವಯಸ್ಸು ತೊಂಬತ್ತಕ್ಕೆ ಮಿಕ್ಕಿದ್ದರೂ ಮೂವತ್ತು ವರುಷದ ತರುಣನಂತೆ ಒಳ್ಳೇ ಉತ್ಸಾಹದಿಂದ ಓಡಾಡುತಿದ್ದನು.

ಮುಸಲ್ಮಾನರ ಸೈನ್ಯವು ವಿಜಯನಗರ ರಾಜ್ಯದೊಳಗಿನ ಕೃಷ್ಣೆಯ ಉತ್ತರದ ಕೆಲಹಳ್ಳಿಗಳನ್ನು ಹಾಳುಮಾಡಿತು. ಕೃಷ್ಣೆಯ ದಕ್ಷಿಣದಲ್ಲಿ ತಿರುಮಲರಾಯನೂ ವೆಂಕಟಾದ್ರಿಯೂ ತಮ್ಮ ಸೈನ್ಯದೊಂದಿಗೆ ಬೀಡುಬಿಟ್ಟಿದ್ದರು. ಕೃಷ್ಣಾನದಿಯನ್ನು ದಾಟಿ ಆಚೆಗೆ ಹೋಗಬೇಕೆಂದು ಸುಲ್ತಾನರ ಮನಸು. ಆದರದು ಶಕ್ಯವಾಗಿದಲಿಲ್ಲ. ದಾಟಲಿಕ್ಕನುಕೂಲವಾದ ಸ್ಥಳಗಳೆಲ್ಲವೂ ರಾಮರಾಯನ ಸೈನಿಕರಿಂದ ಆಕ್ರಮಿಸಲ್ಪಟ್ಟಿದ್ದುವು. ಅಲ್ಲದೆ ಕೃಷ್ಣೆಯ ದಕ್ಷಿಣದಂಡೆಯಲ್ಲಿ ರಾಮರಾಯನ ಅಪಾರ ಸೈನ್ಯವು ಸಜ್ಜಾಗಿರುವುದೆಂಬುವೂ ಅವರಿಗೆ ಗೊತ್ತಾಯಿತು. ಆಗವರು ಒಂದು ಹಂಚಿಕೆಮಾಡಿದರು. ತಮ್ಮ ಸೈನ್ಯವನ್ನು ಬೇರೆಕಡೆಗೆ ಸಾಗಿಸಿದಂತೆ ತೋರಿಸಬೇಕೆಂದೂ ಹಾಗೆ ತಮ್ಮ ಸೈನ್ಯವು

ಹೋದುದು ರಾಮರಾಯನಿಗೆ ತಿಳಿದರೆ ಅವನು ತಮ್ಮನ್ನು ಬೆನ್ನಟ್ಟ ಲಿಕ್ಕೆ ತನ್ನ ಸೈನಿಕರಿಗೆ ಅಪ್ಪಣೆ ಕೊಡುವನೆಂದೂ ಹಾಗೆ ಅಪ್ಪಣೆ ಕೊಟ್ಟೊಡನೆ ತಾವು ಅದೇ ಹಾದಿಯಿಂದ ದಾಟಿ ಅವರ ಸೈನ್ಯದ ಮೇಲೆ ಬೀಳಬೇಕೆಂದೂ ಗೊತ್ತುಮಾಡಿಕೊಂಡರು. ಆ ಪ್ರಕಾರ ಸೈನ್ಯ ಸಾಗಿದಂತೆ ತೋರಿಸಿಯೂ ಆಯಿತು ಸುಲ್ತಾನರೆಣಿಸಿ ದಂತೆಯೇ ಆಯಿತು. ರಾಮರಾಯನು ಪೂರ್ಣವಾಗಿ ಮೋಸ ಹೋದನು. ತನ್ನ ಸೈನ್ಯಕ್ಕೆ ಒಮ್ಮೆಲೆ ಹೋಗಿ ಮುಸಲ್ಮಾನ ಸೈನ್ಯದ ಮೇಲೆ ಬೀಳಲು ಅಪ್ಪಣೆ ಕೊಟ್ಟನು. ಹಾಗಾಗುವುದನ್ನೇ ಕಾದಿದ್ದ ಮುಸಲ್ಮಾನ ಸೈನ್ಯವು ನದಿಯನ್ನು ದಾಟಿಹೋಗಿ ಒಮ್ಮೆಲೆ ವಿಜಯ ನಗರದ ಸೈನ್ಯದ ಮೇಲೆ ಬಿದ್ದಿತು. ಆದಾಗ ಎರಡೂ ಸೈನ್ಯಗಳ ನಡುವೆ ಕೈಗೆ ಕೈ ಹತ್ತಿತು. ಯುದ್ಧದ ಮೊದಲ ಹೊಡತವು ಬಹು ಭಯಂಕರವಾಗಿ ಸಾಗಿತು. ಎರಡೂ ಬದಿಯವರು ಒಬ್ಬರಮೇಲೊ ಬ್ಬರು ಈರ್ಷೆಯಿಂದ ನಾಗಿಹೋದರು. ಎರಡೂ ಸೈನ್ಯಗಳಲ್ಲಿ ಅಪರಿ ಮಿತ ಪ್ರಾಣಹಾನಿಯಾಯಿತು. ಆದರೆ ಕೊನೆಗೆ ಮುಸಲ್ಮಾನರ ಸೈನ್ಯವು ಹಿಂದೆಗೆಯಿತು. ಹಿಂದುಗಳ ಹೊಡೆತವನ್ನು ತಡೆಯದೆ ಹೋಯಿತು!

ಕಾಳಗದ ಪ್ರಾರಂಭದಲ್ಲಿ ತಿರುಮಲರಾಯನೂ ವೆಂಕಟಾದ್ರಿಯೂ ಕಾಳಗದ ಹೊಣೆಯನ್ನೆಲ್ಲ ತಮ್ಮ ಮೇಲೆ ಹಾಕಿ ರಾಮರಾಯನಿಗೆ ಹಿಂದೆ ನಿಲ್ಲುವುದಾಗಿ ಬೇಕಾದಷ್ಟು ಹೇಳಿದರು; ಅಂಗಲಾಚಿ ಬೇಡಿ ಕೊಂಡರು. ಆದರೆ ಯುದ್ಧವೆಂದರೆ ಉಬ್ಬಿ ಉಡದಂತಾಗುವವನು ರಾಮರಾಯ. ಇಂತಹನು ಅವರ ಮಾತು ಕೇಳುವನೆ? ತಾನೇ ಮುಖ್ಯ ಸೇನಾಪತಿಯಾಗಿ ಯುದ್ಧವನ್ನು ನಡಿಸಿದನು. ಇಪ್ಪತ್ತೇಳು ದಿವಸಗಳವರೆಗೆ ಯುದ್ಧವು ಒಳ್ಳೆ ರಭಸದಿಂದಲೇ ನಡೆಯಿತು.

೧೫೬೫ ನೆಯ ಇಸ್ವಿಯ ಜನವರಿ ೨೩ ನೆಯ ತಾರೀಖು ಯುದ್ಧದ ಕೊನೆಯ ದಿವಸ. ಆ ದಿನ ಪ್ರಾತಃಕಾಲ ಮೊದಲು ಗೊಂಡು ರಾತ್ರಿ ಒಂಬತ್ತು ತಾಸುಗಳವರೆಗೂ ಯುದ್ಧವು ನಡೆಯಿತು. ಆ ದಿನ ರಾಮರಾಯನು ಸೈನ್ಯದಲ್ಲಿ ತಿರುಗಾಡಿ "ಈ ಯುದ್ಧವು ಸಾಮಾನ್ಯವಾದುದಲ್ಲ ಗೆದ್ದರೆ ಹಿಂದುಸ್ಥಾನವನ್ನೆಲ್ಲ ಏಕಛತ್ರ ದಿಂದ ಆಳಬೇಕು. ಇಲ್ಲವಾದರೆ ರಾಜ್ಯವನ್ನೆಲ್ಲ ಮುಸಲ್ಮಾನರಿಗೆ ಒಪ್ಪಿಸಬೇಕು. ನನಗೀಗ ೯೬ ವರುಷ ವಯಸ್ಸು. ಸೋಲೆಂಬುದು ನನಗಿನ್ನೂ ಗೊತ್ತಿಲ್ಲ. ಈಗಲೂ ಸೋಲಲಾರೆನು; ಅವಮಾನ ಹೊಂದ ಲಾರೆನು. ನೋಡಿಕೊಂಡು ಯುದ್ಧಮಾಡಿರಿ! ಅಂಜುಬುರುಕರಾದ ವರು, ಜೀವಕೊಡಲು ಹಿಂದುಮುಂದು ನೋಡುವವರು ಈಗಲೇ ಬಿಟ್ಟುಹೋಗಿರಿ ಏನಾಗುವುದು ಸೋಕ್ಷಮೋಕ್ಷ ಇಂದು ಆಗಿಹೋಗಲಿ! ಎಂದು ಸೈನಿಕರಿಗೆ ಹೇಳುತ್ತಸಾಗಿದನು. ಆದಾಗಲೆ ಅವನ ತಮ್ಮಂದಿ ರಿಬ್ಬರೂ ತಮ್ಮ ಸೈನ್ಯವನ್ನೆಲ್ಲ ತೆಗೆದುಕೊಂಡು "ಇಂದು ಸಾಯು ವೆವು ಇಲ್ಲವೆ ಗೆದೆಯುವೆವು" ಎಂದಾಣೆ ಇಟ್ಟುಕೊಂಡು ಯುದ್ಧಕ್ಕೆ ಅಣಿಯಾದರು. ರಾಮರಾಯನು ಮೇಣೆಯಲ್ಲಿ ಕುಳಿತುಕೊಂಡು ಹುರುಪುಗೊಡುತ್ತ ಸೈನ್ಯದಲ್ಲಿ ಅತ್ತಿಂದಿತ್ತ ಇತ್ತಿಂದತ್ತ ಆಲೆದಾಡು ತಿದ್ದನು. ಕೈಕೆಳಗಿನ ಸರದಾರರು ಮೇಣೆಯನ್ನು ಬಿಟ್ಟು ಕುದುರೆ ಹತ್ತಬೇಕೆಂದು ಪರಿಪರಿಯಿಂದ ಹೇಳಿಕೊಂಡರು. ರಾಯನು ಅವರ ಮಾತನ್ನು ಲಕ್ಷ್ಯಕ್ಕೆ ತರಲೇ ಇಲ್ಲ "ಹ! ಎಷ್ಟಾದರೂ ಅವರು ನನ್ನ ಮುಂದಿನ ಕೂಸು ನನಗೆ ಈಡೆ! ಒಂದು ಹೊಡತಕ್ಕೆಯೆ ಅವರನ್ನು ಹಾರಿಸಿಬಿಡುವೆನು!" ಎಂದುತ್ತರವಿತ್ತು ಹಾಗೆಯೇ ಸಾಗಿದನು.

ಮಧ್ಯಾಹ್ನದ ಸುಮಾರಿಗೆ ಕಾಳಗವು ಒಳ್ಳೆ ರಂಗಿಗೆ ಬಂದಿತು.

ವೆಂಕಟಾದ್ರಿಯು ತನ್ನ ಸೈನ್ಯವನ್ನು ತೆಗೆದುಕೊಂಡು ಒಮ್ಮೆಲೆ ವಿಜಾಪುರದ ಸುಲ್ತಾನನ ಮೇಲೆ ಏರಿಹೋದನು. ಆದರಿಂದ ಮುಸಲ್ಮಾನರ ಸೈನ್ಯದಲ್ಲಿ ಗಲಬಿಲಿಯೆದ್ದುಹೋಯಿತು. ಹೇಳಕೂಡದಷ್ಟು ಹಾನಿಯೂ ಆಯಿತು. ಆ ಸೈನ್ಯದ ಹೊಡೆತಕ್ಕೆ ಆದಿಲಶಹನು ಸ್ಥಲ ಬಿಟ್ಟು ಕದಲಬೇಕಾಯಿತು. ಬೇರೊಂದು ಕಡೆಗೆ ತಿರುಮಲರಾಯನೂ ಒಳ್ಳೆ ಶೌರ್ಯದಿಂದ ಕಾದತೊಡಗಿದ್ದನು. ಅವನ ನೆರವಿಗೆ ಅವನ ಮಗನೇ ನಿಂತಿದ್ದನು. ತಂದೆಮಕ್ಕಳು ಸೈನ್ಯವನ್ನೆಲ್ಲ ಸವರುತ್ತ ಯಮನಂತೆ ರಣದಲ್ಲಿ ಸಂಚರಿಸುತಿದ್ದರು. ಇವರ ಹೊಡೆತಕ್ಕೆ ಕುತುಬಶಹನೂ ನಿಜಾಮಶಹನೂ ದಿಕ್ಕುಪಾಲಾಗುವುದರಲ್ಲಿದ್ದರು. ಆದರೆ ಅಷ್ಟರಲ್ಲಿ ತಂದೆಮಕ್ಕಳಿಬ್ಬರಿಗೂ ಪೆಟ್ಟು ತಗುಲಿ ಭಯಂಕರವಾದ ಗಾಯಗಳಾದುವು. ಇಬ್ಬರೂ ರಣಾಂಗಣವನ್ನು ಬಿಡಬೇಕಾಯಿತು. ಇದರಲ್ಲಿ ತಿರುಮಲರಾಯನದೊಂದು ಕಣ್ಣೇ ಹೋಯಿತು. ಅವನ ಮಗನಾದ ರಘುನಾಥರಾಯನು ಮರಣಹೊಂದಿದನು.

ಈ ವರ್ತಮಾನವು ರಾಮರಾಯನಿಗೆ ತಿಳಿದಕೂಡಲೆ ಅವನು ಒಳ್ಳೇ ತ್ವೇಷದಿಂದ ಶತ್ರುಗಳ ಮೇಲೆ ಸಾಗಿಹೋದನು. ತಾನು ಕುದುರೆಯ ಮೇಲೆ ಕುಳಿತುಕೊಂಡು ಸೈನಿಕರಿಗೆ ಹುರುಪುಗೊಡುತ್ತ ವೈರಿಗಳ ಮಧ್ಯದಲ್ಲಿಯೇ ಹೊಕ್ಕನು. ಇವನ ಸೈನ್ಯದ ಹೊಡೆತಕ್ಕೆ ಬೇದರಗೋವಳಕೊಂಡಗಳ ಬಾದಶಹರು ಓಡಿಹೋದರು. ರಾಮರಾಯನು ವೈರಿಗಳ ಮಧ್ಯದಲ್ಲಿ ಸೇರಿ ಒಳ್ಳೇ ಕಲಿತನದಿಂದ ಕಾದಿದನು. ರಾಮರಾಯನು ಹಾಗೂ ಅವನ ಸೈನ್ಯದವರು ತೋರಿಸಿದ ಶೌರ್ಯವನ್ನು ಅನೇಕ ಇತಿಹಾಸಕಾರರು ಹೊಗಳಿರುವರು.

ಕೆಲಹೊತ್ತಿನ ಮೇಲೆ ಆದಿಲಶಹನು ಸಾವರಿಸಿಕೊಂಡು ಮತ್ತೆ ಕಾಳಗಕ್ಕೆ ಅಣಿಯಾಗಿ ಬಂದನು. ಇದೇ ಸಮಯದಲ್ಲಿ ಅಹಮ್ಮದನಗರದ

ಸುಲ್ತಾನನು ಓಡಿಹೋಗುತಿದ್ದ ತನ್ನ ಸೈನ್ಯವನ್ನು ಕಲೆಹಾಕಿ ಇಂದಿನ ಯುದ್ಧದಲ್ಲಿ ಹಿಂದೆಗೆಯಲೇಬಾರದು ಗೆದ್ದುದಾದರೂ ಆಗಬೇಕು ಇಲ್ಲವೆ ಜೀವವಾದರೂ ಹೋಗಬೇಕು. ಎಂದು ಕಟ್ಟಪ್ಪಣೆಮಾಡಿ ಆದಿಲಶಹನ ಸಹಾಯಕ್ಕೆ ಬಂದನು. ಅಲ್ಲಿ ಮತ್ತೊಮ್ಮೆ ಎರಡೂ ಸೈನ್ಯಗಳ ನಡುವೆ ಚಕಮಕಿ ಹಾರಿತು. ಆದಾಗ ರಾಮರಾಯನು ತಾನು ಹತ್ತಿದ ಕುದುರೆಯಿಂದಿಳಿದು ವಜ್ರಖಚಿತವಾದ ಸಿಂಹಾಸನದಲ್ಲಿ ಕುಳಿತು ಶೌರ್ಯದಿಂದ ಕಾದಿದವರಿಗೆ ಪಾರಿತೋಷಕಗಳನ್ನು ಕೊಡತೊಡಗಿದನು. ಬಂಗಾರದ ಆಭರಣಗಳೂ ಬೆಲೆಯುಳ್ಳ ರತ್ನಗಳೂ ತುಂಬಿದ ಚೀಲಗಳು ಅನೇಕವಾಗಿ ಅವನ ಬಳಿಯಲ್ಲಿರಿಸಿದ್ದವು. ಸೈನಿಕರು ತೋರಿಸಿದ ಶೌರ್ಯದ ಮಾನದಂತೆ ಪಾರಿತೋಷಕಗಳನ್ನು ಕೊಡುತ್ತ ಹುರಿದುಂಬಿ ಸುತ್ತಿದ್ದನಾತ. ಮೊದಲೇ ಜೀವದಹಂಗು ದೊರೆದು ಕಾದುತಿದ್ದ ಹಿಂದುಸೈನ್ಯವು ಮತ್ತಷ್ಟು ಉತ್ಸಾಹದಿಂದ ಕಾದತೊಡಗಿತು. ರಾಯನ ಮಾತಿನಿಂದ ಹುರಿದುಂಬಿ ಕಾದುತಿದ್ದ ಹಿಂದೂಸೈನಿಕರ ಮುಂದೆ ಮುಸಲ್ಮಾನಸೈನಿಕರಾಟವು ಏನೂ ಸಾಗದಾಯಿತು. ಜಯಲಕ್ಷ್ಮಿಯು ರಾಮರಾಯನಿಗೆ ಮಾಲೆ ಹಾಕುವಳೆಂದು ಸ್ಪಷ್ಟ ಕಾಣತೊಡಗಿತು. ಮುಸಲ್ಮಾನರ ಸೈನ್ಯವು ತಂಡತಂಡಾಗಿ ಓಡತೊಡಗಿತು.

ನಿಜಾಮುಶಹನು ಮಾತ್ರ ತನ್ನ ಸೈನ್ಯದ ಮಧ್ಯದಲ್ಲಿ ಅತ್ತಿತ್ತ ಅಲುಗಾಡದೆ ನಿಂತುಕೊಂಡಿದ್ದನು. ಅವನ ಸರದಾರನಾದ ರೂಮಿ ಖಾನನು ತೋಫಿನ ಗುಂಡುಗಳನ್ನು ಒಂದೇ ಸವನೆ ಸುರಿಸುತಲಿದ್ದನು ಅದು ಮಾತ್ರ ಒಳ್ಳೇ ಪರಿಣಾಮಕಾರಿಯಾಯಿತು. ಆ ಗುಂಡಿನ ಮಳೆಯಿಂದ ಹಿಂದೂ ಸೈನ್ಯದಲ್ಲಿ ೫ ಸಾವಿರ ವರೆಗೆ ಜನರು ಪ್ರಾಣ ಕ್ಕೆರವಾದರು. ವಿಜಯನಗರದ ಸೈನ್ಯದಲ್ಲಿ ಅಲ್ಲೋಲಕಲ್ಲೋಲವಾಯಿತು. ಇದೇ ವೇಳೆಯಲ್ಲಿ ರಾಮರಾಯನ ಕೈಕೆಳಗಿನ ಇಬ್ಬರು ಮುಸಲ್ಮಾನ

ಸರದಾರರು ಒಡೆಯನ ಮೇಲೆಯೇ ತಿರುಗಿ ಬಿದ್ದರು. ಇದರಿಂದಂತೂ ರಾಮರಾಯನ ಸೈನಿಕರಿಗೆ ತಮ್ಮವರಾರು ಶತ್ರುಗಳಾರು ಎಂಬುದು ತಿಳಿಯದೆ ಹೋಯಿತು. ಈ ಗೊಂದಲದಲ್ಲಿ ರಾಮರಾಯನಿಗೂ ಪೆಟ್ಟು ತಗುಲಿ ಗಾಯವಾಯಿತು. ಆದಾಗ ಆತನು ಲಗುಬಗೆಯಿಂದ ತನ್ನ ಮೇಣೆಯನ್ನು ಹತ್ತಿ ಸುರಕ್ಷಿತ ಸ್ಥಳಕ್ಕೆ ಹೋಗುವುದರಲ್ಲಿದ್ದನು. ಆದರೆ ಅವನ ದುರ್ದೈವವು ಹಾಗೆ ಮಾಡಗೊಡಲಿಲ್ಲ. ಅವನ ಆಯುಷ್ಯವೇ ತುಂಬಿ ಬಂದಿದ್ದಿತು. ನಿಜಾಮಶಹನ ಆನೆಯೊಂದು ಮದವೇರಿ ಅತ್ತ ಕಡೆಗೇ ಸಾಗಿಬಂದಿತು. ಅದು ತಮ್ಮ ಕಡೆಗೆ ಸಾಗಿಬರುವುದನ್ನು ನೋಡಿ ಬೋಯಿಗಳು ರಾಮರಾಯನ ಮೇಣೆಯನ್ನು ಚೆಲ್ಲಿಕೊಟ್ಟು ಓಡಿಹೋದರು. ರಾಮರಾಯನು ಕಾಲುನಡಿಗೆಯಿಂದಾದರೂ ಹೋಗಿ ಪಾರಾಗಬೇಕೆಂದು ಎಣಿಸಿದನು. ಅಲ್ಲಿಯೂ ಅವನ ಪ್ರತಿಕೂಲ ದೈವವು ಅಡ್ಡಬಂದಿತು. ನಿಜಾಮಶಹನ ಆನೆಯು ಅವನನ್ನು ಸೊಂಡೆಯಿಂದ ಹಿಡಿದೆಳೆಯಿತು. ಈ ಪರಿಸ್ಥಿತಿಯಿಂದಾತನು ರೂಮಿ ಖಾನನ ವಶದಲ್ಲಿ ಸಿಕ್ಕನು. ರೂಮಿಖಾನನು ಆಗಲೆ ಅವನನ್ನು ಕೊಲ್ಲತಕ್ಕವನು. ಅಷ್ಟರಲ್ಲೊಬ್ಬನು "ಅವನನ್ನು ಕೊಲ್ಲಬೇಡ. ಅವನನ್ನು ಒಯ್ದು ನಿಜಾಮಶಹನಿಗೆ ಒಪ್ಪಿಸು. ಅವನೇ ರಾಮರಾಯ!" ಎಂದು ಕೂಗಿ ಹೇಳಿದನು. ರೂಮಿಖಾನನೂ ಅದರಂತೆಯೆ ರಾಮರಾಯನನ್ನು ನಿಜಾಮಶಹನ ವಶಕೊಪ್ಪಿಸಿದನು.

ರಾಮರಾಯನಿಂದ ವಿಶೇಷ ಅಪಮಾನಿತನಾದವನೆಂದರೆ ಈ ನಿಜಾಮ ಶಹನು. ಆದರಿಂದ ರಾಮರಾಯನ ಮೇಲೆ ಆತನ ಸಿಟ್ಟು ಉಕ್ಕುತಿತ್ತು. ಅವನೇ ಉಳಿದ ಸುಲ್ತಾನರನ್ನು ಒಂದುಗೂಡಿಸಿ ವಿಜಯನಗರದ ಮೇಲೆ ಸಾಗಿಬರಲು ಮೊದಲುಜ್ಜುಗಿಸಿದವನು. ಆಕಸ್ಮಾತ್ತಾಗಿಯೇ ಶತ್ರುವು ಅವನ ಕೈಯಲ್ಲಿ ಬಿದ್ದನು. ಕೇಳುವುದೇನು? "ಈಗ

ಮಾತ್ರ ನನ್ನ ಸೇಡು ತೀರಿತು. ಇನ್ನು ಮೇಲೆ ನನಗೆ ಬೇಕಾದರೆ ನರಕವಾಸವಾದರೂ ಆಗಲಿ!'' ಎಂದವನೆ ರಾಮರಾಯನನ್ನು ಕೊಂದು ಬಿಟ್ಟನು.

ರಾಮರಾಯನು ಸೆರೆಸಿಕ್ಕಿದನ್ನು ಕೇಳಿ ಆದಿಲಶಹನು ನಿಜಾಮ ಶಹನ ಕಡೆಗೆ ಧಾವಿಸಿ ಬಂದನು. ರಾಮರಾಯನ ವಿಷಯದಲ್ಲಿ ನಿಜಾಮಶಹನಲ್ಲಿ ತ್ವೇಷವಿರುವುದೆಂಬುದು ಅವನಿಗೆ ಗೊತ್ತಿದ್ದಿತು. ಅದಲ್ಲಿ ನಿಜಾಮಶಹನು ಒಮ್ಮೆಲೆ ಆತನ ತಲೆ ಹೊಡೆಯುವನೋ ಎಂದು ಧಾವಿಸಿ ಬಂದುದು. ಆದಿಲಶಹನ ಮೇಲೆ ರಾಮರಾಯನ ಪ್ರೇಮ ಬಹಳ. ಮಗನಂತೆ ಪ್ರೀತಿಸುತ್ತಿದ್ದನವನನ್ನು. ಆದರೆ ಅವನು ಬರುವು ದರೊಳಗೆ ಎಲ್ಲ ಕೆಲಸವೂ ತೀರಿ ಹೋಗಿದ್ದಿತು.

ರಾಮರಾಯನು ಸತ್ತುದು ಹಿಂದೂ ಸೈನ್ಯಕ್ಕೆಲ್ಲ ತಿಳಿಯಬೇಕೆಂದು ಅವನ ತಲೆಯನ್ನು ಈಟಿಯ ಗಣಿಗೆ ಚುಚ್ಚಿ ಮೆರಿಸಿದರು. ಅದನ್ನು ಕಂಡು ಹಿಂದುಸೈನ್ಯವು ದಿಕ್ಕುಪಾಲಾಗಿ ಓಡತೊಡಗಿತು. ಮುಸಲ್ಮಾನ ಸೈನ್ಯವು ಅವರನ್ನು ಬೆನ್ನಟ್ಟಿ ಸವರಿ ಬಿಟ್ಟಿತು ಆ ಕಾಲದಲ್ಲಿ ಮುಸ ಲ್ಮಾನರು ಮಾಡಿದ ಕೊಲೆಯಿಂದ ಸಮರಾಂಗಣವೆಲ್ಲ ರಕ್ತಮಯ ವಾಯಿತು; ರಕ್ತದ ಕಾಲುವೆ ಹರಿಯಿತು. ಆದರಿಂದ ಅದೆಷ್ಟೋ ದಿವಸ ಗಳವರೆಗೆ ಕೃಷ್ಣಾನದಿಯ ನೀರು ರಕ್ತಮಯವಾಗಿಯೇ ಹರಿಯುತಿತ್ತು. ಆಯಿತು. ಈ ರೀತಿ ರಾಕ್ಷಸತಂಗಡಿಗಿಯ ಕಾಳಗದಲ್ಲಿ ವಿಜಯನಗರ ಸಾಮ್ರಾಜ್ಯದ, ಕರ್ಣಾಟಕ ಸಾಮ್ರಾಜ್ಯದ ಅಂತ್ಯವಾಯಿತು. ಸಂಪೂರ್ಣ ಕರ್ಣಾಟಕವು ಮುಸಲ್ಮಾನರ ಬಾಯಿಗೆ ಬಿದ್ದಿತು!

ಜಯಶಾಲಿಗಳಾದ ಮುಸಲ್ಮಾನರು ಆ ಸಮರಾಂಗಣದಲ್ಲಿ ಕೆಲ ದಿವಸ ವಿಶ್ರಾಂತಿಯನ್ನು ತೆಗೆದುಕೊಂಡು ಆಮೇಲೆ ದಾರಿಯಲ್ಲಿಯ ಊರುಗಳನ್ನು ಕೊಳ್ಳೆ ಹೊಡೆಯುತ್ತ ವಿಜಯನಗರಕ್ಕೆ ಹೋದರು.

ವಿಜಯನಗರವನ್ನು ಹೊಕ್ಕು ಆ ಪಟ್ಟಣದ ಸಂಪತ್ತೆಲ್ಲವನ್ನೂ ಸೂರೆ ಮಾಡಿದರು. ಮನೆ ಮಠ ಗುಡಿ ಗುಂಡಾರ ಅರಮನೆಗಳೆಲ್ಲವನ್ನು ಹಾಳು ಮಾಡಿದರು. ಪ್ರತಿಯೊಬ್ಬ ಸೈನಿಕನೂ ತನ್ನ ಕೈಗೆ ಸಿಕ್ಕಷ್ಟನ್ನು ತಾನು ಒಯ್ಯಬಹುದಾದಷ್ಟನ್ನು ಎತ್ತಿಕೊಂಡು ಹೋದನು. ಈ ಸುಲಿಗೆಯಿಂದ ಮುಸಲ್ಮಾನ ಸೈನಿಕರಲ್ಲಿಯ ಪ್ರತಿಯೊಬ್ಬ ಸೈನಿಕನೂ ಶ್ರೀಮಂತನಾದನಂತೆ. ಎಂದ ಮೇಲೆ ಅವರು ಒಯ್ದ ಹಣವೆಷ್ಟಿರಬೇಕೆಂಬುದನ್ನು ಊಹೆಯಿಂದಲೇ ತಿಳಿಯಬೇಕು. ಆಯಿತು. ವಿಜಯನಗರದ ಸತ್ಯನಾಶವಾಯಿತು. ಕರ್ಣಾಟಕ ಸಾಮ್ರಾಜ್ಯದ ರಾಜಧಾನಿಯು ರಣಗುಟ್ಟಿ ಹತ್ತಿತು!

---

# ೧೧ ಅರವೀಡು ರಾಜವಂಶ.

ರಕ್ಕಸತಂಗಡಿಯ ಯುದ್ಧದಲ್ಲಿ ರಾಮರಾಯನು ಮರಣ ಹೊಂದಲು ಅವನ ತಮ್ಮ ತಿರುಮಲರಾಯನು ಸದಾಶಿವರಾಯನನ್ನು ಕರೆದುಕೊಂಡು ಕೈಗೆ ಸಿಕ್ಕಷ್ಟು ದ್ರವ್ಯವನ್ನು ಹೇರಿಕೊಂಡು ಪೆನು ಗೊಂಡೆಗೆ ಹೋದನು. ಅಲ್ಲಿ ಸಿಂಹಾಸನವನ್ನು ಸ್ಥಾಪಿಸಿ ಸಾಮ್ರಾಜ್ಯದ ಗೌರವವನ್ನು ಕಾಯ್ದುಕೊಳ್ಳಲು ಯತ್ನಿಸಿದನು. ಪೋರ್ಚುಗೀಜರ ಕಡೆಯಿಂದ ಯುದ್ಧೋಪಕರಣಗಳನ್ನು ಒದಗಿಸಿಕೊಂಡನು. ಆದರೆ ಒಮ್ಮೆ ಕೀಲು ಕಳಚಿಹೋಗಿ ಸ್ಥಾನಭ್ರಷ್ಟವಾದ ಗಾಲಿಯು ತಿರುಗಿ ಸರಿಯಾಗಿ ಕೂಡುವುದು ಸಾಧ್ಯವಾಗಲಿಲ್ಲ. ಸಾಮ್ರಾಜ್ಯದ ಬಹು ಭಾಗವು ಮುಸಲ್ಮಾನರ ಒಡೆತನಕ್ಕಾಧೀನವಾಯಿತು. ಉಳಿದ ಭಾಗ ದಲ್ಲಿಯ ಮಾಂಡಲಿಕರು ತಮ್ಮ ಸ್ವಾಮಿಭಕ್ತಿಯನ್ನು ನೆನೆದು ಈ ಅಧಿಕಾರವಿಲ್ಲದ ವಿಜಯನಗರದ ಅರಸರ ಮಾಂಡಲಿಕರೆಂದು ಹೇಳಿ ಕೊಂಡು ತಮ್ಮ ಕಾರುಬಾರ ಸಾಗಿಸ ತೊಡಗಿದರು.

ಸದಾಶಿವರಾಯನು ಹಾಗೂ ಹೀಗೂ ೧೫೭೦ ರ ವರೆಗೆ ಅರಸು ತನ ಮಾಡಿಕೊಂಡಿದ್ದನು. ತರುವಾಯ ಅವನ ಕೊಲೆಮಾಡಿಸಿ ತಿರು ಮಲರಾಯನು ತಾನೇ ಸಿಂಹಾಸನವನ್ನೇರಿದನು. ತುಳುವವಂಶವು ಇಲ್ಲಿಗೆ ಮುಗಿದಂತಾಯಿತು.

ತಿರುಮಲರಾಯನೂ ಅವನ ತರುವಾಯ ಆಳಿದ ಅವನ ವಂಶ ದವರೂ ಅರವೀಡು ಮನೆತನದವರು. ಸಾಳುವ ನರ ಸಿಂಹನ ಆಶ್ರಯದಲ್ಲಿ ಅರವೀಟಿ ಬುಕ್ಕರಾಯನೆಂಬವನಿದ್ದನು. ಇವನೇ ಈ ವಂಶದ ಮೂಲಪುರುಷ. ಇವನಿಂದಲೇ ಈ ವಂಶಕ್ಕೆ ಅರವೀಡುವಂಶವೆಂದು ಹೆಸರುಬಂದುದು. ರಾಮರಾಯ ತಿರುಮಲ ರಾಯ ವೆಂಕಟಾದ್ರಿ ಎಂಬವರು ಈ ಅರವೀಟಿ ಬುಕ್ಕನ ಮರಿ

ಮಕ್ಕಳು. ಕೃಷ್ಣದೇವರಾಯನ ಮಗಳಾದ ತಿರುಮಲಾಂಬೆಯನ್ನು ರಾಮರಾಯನಿಗೆ ಕೊಟ್ಟ ಸಂಗತಿ ಈ ಮೊದಲು ಹೇಳಿಯೇ ಇದೆ. ತಿರುಮಲರಾಯನಿಗೆ ಮತ್ತೊಬ್ಬ ಮಗಳನ್ನು ಕೊಟ್ಟಿದ್ದಿತು. ತಿರುಮಲರಾಯನ ಹೆಂಡತಿಯ ಹೆಸರು ವೆಂಗಲಾಂಬೆ. ಈ ತಿರುಮಲಾಂಬೆ ವೆಂಗಲಾಂಬೆಯರ ಮಕ್ಕಳೇ ತಿರುಮಲರಾಯನ ತರುವಾಯ ಪೆನುಗೊಂಡೆ ಚಂದ್ರಗಿರಿಗಳಲ್ಲಿ ಆಳಿದವರು. ಎಂದರೆ ಸಾಳುವ ವಂಶದ ಸ್ತ್ರೀಸಂತತಿಯೇ ಇದು.

ತಿರುಮಲರಾಯನು ೧೫೭೧ ರಲ್ಲಿ ಮರಣಹೊಂದಲು ಅವನ ಮಗನಾದ ಶ್ರೀರಂಗರಾಯನು (೧೫೭೨--೮೬) ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿಯೂ ಹಲಕೆಲವರು ಮಾಂಡಲಿಕರು ವಿಜಯನಗರದ ಅಧಿಕಾರವನ್ನು ಕಿತ್ತೊಗೆಯಬೇಕೆಂದು ಪ್ರಯತ್ನಿಸಿದರು. ಅವರಲ್ಲಿ ಮುಖ್ಯರೆಂದರೆ ಪಶ್ಚಿಮ ಸಮುದ್ರತೀರದ ಸಂಸ್ಥಾನಿಕರು. ಶ್ರೀರಂಗ ರಾಯನು ಅವರ ಆಟ ನಡೆಯಗೊಡಲಿಲ್ಲ. ಅವರೊಡನೆ ಕಾಳಗ ಹೂಡಿ ಅಂಕೆಯಲ್ಲಿ ತಂದನು.

ವಿಜಯನಗರವನ್ನು ಹಾಳು ಮಾಡಿದಷ್ಟಕ್ಕೆ ಮುಸಲ್ಮಾನರು ಸುಮ್ಮನೆ ಕುಳಿತರೆಂಬಲ್ಲ. ಆ ಸಾಮ್ರಾಜ್ಯದ ನಾಶದನಂತರ ತುಂಗ ಭದ್ರೆಯ ದಕ್ಷಿಣದ ಕಡೆಗೂ ಅವರ ದಾಳಿಗಳು ನಡೆದುವು. ಹೀಗೆ ಸಾಗಿಬರುವವನೆಂದರೆ ವಿಜಯಪುರದ ಆದಿಲಶಹನು. ಅವನ ರಾಜ್ಯವು ಆಗ ಶಿವಮೊಗ್ಗೆ ಜಿಲ್ಲೆಯ ಚಂದ್ರಗುತ್ತಿಯ ವರೆಗೂ ಬೆಳೆದಿದ್ದಿತು. ಆದಿಲಶಹನು ಎರಡು ಮೂರು ಸಾರೆ ಪೆನುಗೊಂಡೆಯ ಮೇಲೆಯೂ ಸಾಗಿ ಹೋಗಿದ್ದನು. ಶ್ರೀರಂಗರಾಯನೂ ಅವನನ್ನೆದುರಿಸಿದ್ದನು. ಅದೊಮ್ಮೆ ಯುದ್ಧದಲ್ಲಿ ಶ್ರೀರಂಗರಾಯನು ಆದಿಲಶಹನ ಕೈಸೆರೆ ಸಿಕ್ಕಿದ್ದನು. ಅದಾಗ ಜಗದೇವರಾಯನೆಂಬ ಸರದಾರನು ವಿಶೇಷ

ಪ್ರಯತ್ನ ಮಾಡಿ ಆದಿಲಶಹನಿಗೆ ಕಾಣಿಕೆ ಕೊಟ್ಟು ಅವನನ್ನು ಬಿಡಿಸಿ ಕೊಂಡು ಬಂದನು.

ಶ್ರೀರಂಗರಾಯನ ತರುವಾಯ ಅವನ ಹಿರಿಯ ಮಗನು ಪಟ್ಟ ವೇರಬೇಕಾಗಿದ್ದಿತು. ಆದರವನು ಇನ್ನೂ ಚಿಕ್ಕವನಿದ್ದನು. ಅದರಿಂದ ಅವನ ತಮ್ಮ ವೆಂಕಟಪತಿರಾಯನು ಸಿಂಹಾಸನವನ್ನೇರಿದನು. ತಿರು ಮಲರಾಯನು ಸದಾಶಿವರಾಯನನ್ನು ಕೊಲೆಮಾಡಿಸಿ ತಾನೇ ಸಿಂಹಾ ಸನವನ್ನಾಕ್ರಮಿಸಿದನೆಂದು ಹೇಳಿದೆಯಷ್ಟೆ. ಕೊಲೆ ಮಾಡಿದವನೀ ವೆಂಕಟರಾಯನೆಂದಾರೋಪವಿದ್ದಿತು. ಆದರಿಂದ ಇವನು ಪಟ್ಟಕ್ಕೆ ಬಂದೊಡನೆ ಸರದಾರರು ಮಾಂಡಲಿಕರು ಇವನ ವಿರುದ್ಧವಾಗಿ ಬಂಡೆಬ್ಬಿಸಿದರು. ಆದರೆ ಇವನು ಬಂಡುಗಾರರನ್ನು ಹಣ್ಣಿಗೆ ತಂದು ಒಳ್ಳೆ ವ್ಯವಸ್ಥೆಯಿಂದ ರಾಜ್ಯಭಾರ ಮಾಡಿದನು. ಮುಸಲ್ಮಾನರ ಉಪಟಳಕ್ಕೆ ಸಿಲುಕಬಾರದೆಂದು ಸಿಂಹಾಸನವನ್ನು ಪೆನುಗೊಂಡೆ ಯಿಂದ ಚಂದ್ರಗಿರಿಗೆ ಒಯ್ದನು. (೧೫೯೩) ರಾಜ್ಯದಲ್ಲಿ ಅನೇಕ ಕೆರೆಕಾಲುವೆಗಳನ್ನು ಕಟ್ಟಿಸಿದನು. ಬಡಬಗ್ಗರಿಗೂ ವಿದ್ವಾಂಸರಿಗೂ ಉಂಬಳಿ ಹಾಕಿಕೊಟ್ಟನು. ಪ್ರಜೆಗಳಿಗೆ ಸುಖವಾಗುವಂತೆ ರಾಜ್ಯ ಭಾರ ಮಾಡಿದನು. ಅವರಿಂದ ಒಳ್ಳೆಯ ಅರಸನೆಂದು ಹೊಗಳಿಸಿ ಕೊಂಡನು.

ವೆಂಕಟಪತಿರಾಯನು ಮರಣಹೊಂದಲು (೧೬೧೪) ಮತ್ತೆ ಪಟ್ಟದ ವಿಷಯದಲ್ಲಿ ಕಲಹ ಬೆಳೆಯಿತು. ವೆಂಕಟಪತಿರಾಯನು ಜಗ ರಾಯನೆಂಬ ಸರದಾರನ ಬಾಯಮ್ಮ ಎಂಬ ಮಗಳನ್ನು ಮದುವೆ ಯಾಗಿದ್ದನು. ಅವಳ ಹೊಟ್ಟೆಯಲ್ಲಿ ಮಕ್ಕಳಿರಲಿಲ್ಲ. ದಾನ ಮಾಡಿ ದಳು, ಧರ್ಮ ಮಾಡಿದಳು; ದೇವರಿಗೆ ಹರಕೆಹೊತ್ತಳು. ಏನಾದ ದರೇನು ಪ್ರಾರಬ್ಧದಲ್ಲಿ ಸಂತಾನದ ಯೋಗವೇ ಇದ್ದಿಲ್ಲ. ರಾಜ್ಯವು

ತನಗಲ್ಲದೆ ಎರಡನೆಯವರ ಪಾಲಾಗುವುದಲ್ಲ! ಎಂದು ಕೊರಗಹತ್ತಿ ದಳು. ಅದಾಗ ಅವಳ ತವರುಮನೆಯ ಬ್ರಾಹ್ಮಣ ಪರಿಚಾರಿಕೆ ಯೊಬ್ಬಳು ಒಂದು ಹಂಚಿಕೆ ತೆಗೆದಳು. "ನಾನು ಬಸಿರಿರುವೆನು. ನೀನೂ ಬಸಿರೆಯಿರುವೆಯಾಗಿ ಸುದ್ದಿಯನ್ನು ಹರಡು. ನಾನು ಹಡೆ ಯುತ್ತಲೆ ಹುಟ್ಟಿದ ಕೂಸನ್ನು ಗುಪ್ತವಾಗಿ ನಿನ್ನೆಡೆಗೆ ಕಳುಹುವೆನು. ಅದೇ ನಿನ್ನ ಮಗುವೆಂದು ಹೇಳಿ ಸಾಕಿ ಸಲುಹು ಎಂದರೆ ನಿನ್ನೀ ಕೊರಗು ದೂರಾಗುವುದು!" ಎಂದು ರಾಣಿಗೆ ಹೇಳಿದಳು. ರಾಣಿಗೂ ಅದು ಒಪ್ಪಿಗೆಯಾಯಿತು. ಪರಿಚಾರಿಕೆಯ ಬಸಿರು ಬೆಳೆದಂತೆ ರಾಣಿಯ ಬಸಿರೂ ಬೆಳೆಯ ತೊಡಗಿತು. ಬಯಕೆಯಾಯಿತು; ನೋನ್ಗೆ ಮುಡಿಸಿದುದಾಯಿತು. ಬೆಳದಿಂಗಳೂಟಾಯಿತು. ಬಸಿರಿಗಾಗತಕ್ಕ ಆರ ರೋಪಚಾರಗಳು, ನಡೆಯತಕ್ಕ ಉತ್ಸವಗಳು ಎಲ್ಲವೂ ಆದುವು ಮಗುವೂ ಹುಟ್ಟಿತು. ಶ್ರೀರಂಗ (ಚಿಕ್ಕ) ರಾಯನೆಂದು ನಾಮ ಕರಣವೂ ಆಯಿತು. ಪರಿಚಾರಿಕೆಯ ಕುವರನು ರಾಜಕುವರನಾಗಿ ಬೆಳೆದನು. ೧೪ ವರ್ಷವಾಗುತ್ತಲೆ ಬೀಗ ಓಬಲರಾಯನ ಮಗಳನ್ನು ತಂದುಕೊಂಡವನಿಗೆ ಮದುವೆಯನ್ನು ಮಾಡಿದರು.

ರಾಯನಿಗೆ ಹೆಂಡತಿಯ ಕಾರಸ್ಥಾನವೆಲ್ಲವೂ ತಿಳಿದಿದ್ದಿತು. ಆದರೆ ಹೆಂಡತಿಯನ್ನೂ ಬೀಗನನ್ನೂ ಸಂತೋಷದಲ್ಲಿರಿಸುವುದಕ್ಕಾಗಿ ಅವರು ಮಾಡಿದುದೆಲ್ಲಕ್ಕೂ ಹೂಂಗುಟ್ಟಿ ಬಿಡುತ್ತಿದ್ದನು. ಮರಣಕಾಲದಲ್ಲಿ ಹಾಗೆಯೆ ಸುಮ್ಮನಿದ್ದರೆ ಅವನ ತರುವಾಯ ಈ ಚಿಕ್ಕರಾಯನೆ ನಿರಾ ತಂಕವಾಗಿ ಅರಸನಾಗಿ ಬಿಡಬಹುದಾಗಿದ್ದಿತು ಎಂದೊದಗಿದ ಗೊಂದ ಲವು ಏಳುತ್ತಲೇ ಇರಲಿಲ್ಲ. ಆದರೆ "ತನ್ನ ಹಿರಿಯರಿಂದ ಬಂದ ಅರಸೊತ್ತಿಗೆಯು ಅದಾರ ಪಾಲಿಗೊ ಆಗುವುದಲ್ಲ!" ಎಂದು ರಾಯನು ಚಡಪಡಿಸತೊಡಗಿದನು. ಹೆಂಡತಿಯ ಸಂತೋಷಕ್ಕಾಗಿ ಇದಿಷ್ಟು ದಿನ

ತಿಳಿದೂ ತಿಳಿದೂ ಸುಮ್ಮನಿದ್ದುದು ಒಳಿತಾಗಲಿಲ್ಲವೆಂದೂ ಎನಿಸಿರಬಹುದು. ಹಾಗೆ ಸುಮ್ಮನಿದ್ದುದರಿಂದಲೇ ಮುಂದಿನ ಭಯಂಕರ ಪರಿಸ್ಥಿತಿಯು ಉಂಟಾಯಿತು. ಇದು ಸುಳ್ಳಲ್ಲ. ರಾಯನು ಮರಣಸಮಯದಲ್ಲಿ ತನ್ನ ವಂಶದವನಾದ ಶ್ರೀರಂಗರಾಯನನ್ನು ಕರೆದು—"ನನ್ನ ತರುವಾಯ ರಾಜ್ಯಕ್ಕೆ ನೀನೇ ಒಡೆಯ. ಇಕೊಳ್ಳು ಈ ಮುದ್ರೆಯುಂಗುರವನ್ನು" ಎಂದು ತನ್ನ ಬೆರಳುಂಗುರವನ್ನು ತೆಗೆದು ಮುಂದೆ ಮಾಡಿದನು. ಶ್ರೀರಂಗರಾಯನು ಅದಕ್ಕೊಪ್ಪಲಿಲ್ಲ. ಅವನಿಗೂ ಆ ಉಂಗುರವು ತರುವ ಕೇಡು ಸ್ಪಷ್ಟವಾಗಿ ಕಂಡಿರಬೇಕು. ಆದರೆ ಮರಣಾಸನ್ನನಾದ ರಾಯನ ಹಾಗೂ ಉಳಿದ ಸರದಾರರ ಆಗ್ರಹವನ್ನು ಮುರಿಯುವುದಾಗಲಿಲ್ಲ. ಸ್ವೀಕರಿಸಿದನು. ರಾಯನು ತಾನು ಹಿಂದೆ ಮಾಡಿದ ತಪ್ಪನ್ನು ಸರಿಮಾಡಿಕೊಂಡೆನೆಂದು ಸಮಾಧಾನದಿಂದ ದೇಹಬಿಟ್ಟನು.

ರಾಯನ ಜಡದೇಹಕ್ಕೆ ಅಗ್ನಿಸಂಸ್ಕಾರವಾಯಿತು. ಅವನ ಮೂವರು ರಾಣಿಯರು ಅವನೊಡನೆ ಚಿತೆಯನ್ನೇರಿದರು. ಉತ್ತರಕ್ರಿಯಾದಿಗಳೂ ಆದುವು. ಶ್ರೀರಂಗರಾಯನು ಪಟ್ಟವೇರಿದನು. ಜಗರಾಯನಿಗೆ ಸುಮ್ಮನಿರುವದಾದೀತೇ? ಅವನು ತನ್ನ ದಂಡುತೆಗೆದುಕೊಂಡು ಬಂದು ಕೋಟೆಯನ್ನು ಹೊಕ್ಕು ಅರಮನೆಗೆ ಮುತ್ತಿಗೆ ಹಾಕಿ ಶ್ರೀರಂಗರಾಯನನ್ನೂ ಅವನ ಹೆಂಡರುಮಕ್ಕಳನ್ನೂ ಸೆರೆಯಲಿಟ್ಟು ತನ್ನ ಮರಿಮಗನನ್ನು (ಮಗಳಮಗ) ಎಂದರೆ ವೆಂಕಟಪತಿರಾಯನ ಸಾಕುಮಗನಾದ ಶ್ರೀರಂಗರಾಯನ ಮಗ ರಾಮಚಂದ್ರರಾಯನನ್ನು ಪಟ್ಟಕ್ಕೆ ಕುಳ್ಳಿರಿಸಿದನು.

ಜಗರಾಯನ ಸಾಮರ್ಥ್ಯವನ್ನರಿತ ಸರದಾರರೆಲ್ಲರೂ ಅವನಿಗಂಕಿತರಾದರು. ಆದರೆ ಎಚ್ಚಮ್ಮನಾಯಕನೆಂಬ ಸ್ವಾಮಿಭಕ್ತನು ಮಾತ್ರ ಎದುರು ನಿಂತನು. ಇವನನ್ನೂ ತನ್ನ ಪಕ್ಷಕ್ಕೆ ಎಳೆಯು

ಕೊಳ್ಳಬೇಕೆಂದು ಬಹು ಪ್ರಯತ್ನ ಮಾಡಿದನು. ಆದರದು ಸಾಧ್ಯ ವಾಗಲಿಲ್ಲ. ವೆಂಕಟಪತಿರಾಯನ ಇಚ್ಛೆಯಂತೆ ತಿರುಗಿ ಸೆರೆಯಲ್ಲಿದ್ದ ಅರಸನನ್ನೇ ಪಟ್ಟಕ್ಕೆತರಲು ಅವನು ಪ್ರಯತ್ನ ನಡಿಸಿದನು. ಇದಕಾಗಿ ಅರಸನನ್ನೊಮ್ಮೆ ಕಾಣಬೇಕೆಂದು ಉದ್ಯೋಗ ನಡಿಸಿದನು. ಅದು ಸಾಧ್ಯವಾಗಲಿಲ್ಲ. ಒಬ್ಬ ಅರಸುಮಗನನ್ನಾದರೂ ಸೆರೆಮನೆ ಯಿಂದ ಬಿಡಿಸಿಕೊಂಡು ಬರಬೇಕೆಂದೆಣಿಸಿದನವನು. ಸೆರೆಮನೆಯ ಅರಿವೆ ಗಳನ್ನೊಗೆಯುತಿದ್ದ ಅಗಸನೊಬ್ಬನನ್ನು ಒಡೆಸಿಕೊಂಡು ಅರಸನಿಗೆ ಪತ್ರವೊಂದು ಕಳಿಸಿಕೊಟ್ಟನು. "ನಿಮ್ಮ ಮಗನೊಬ್ಬನನ್ನು ಈತನ ಕೂಡ ಕಳುಹಬೇಕೆಂ"ಬುದೇ ಅವರಾಶಯ. ಅರಸನಿಗೂ ಅದು ಸರಿ ಕಂಡಿತು. ತನ್ನ ನಡುವಿನ ಮಗನನ್ನು ಆ ಅಗಸನ ಕೂಡ ಕಳು ಹಲು ಒಡಂಬಟ್ಟನು. ಅಗಸನು ತನ್ನ ಅರಿವೆಯ ಮೂಟೆಯಲ್ಲಿ ಆ ಮಗನನ್ನು ಕಟ್ಟಿಕೊಂಡು ಬಂದು ಎಚ್ಚಮ್ಮನಿಗೊಪ್ಪಿಸಿದನು.

ಈ ಸುದ್ದಿಯು ಹಬ್ಬಲು ಮತ್ತೆ ಹಲವರು ಸರದಾರರು ಬಂದು ಎಚ್ಚಮ್ಮನನ್ನು ಕೂಡಿದರು. ಜಗರಾಯನು ಒಳ್ಳೇ ಚಿಂತೆಗೊಳ ಗಾದನು. ಸೆರೆಮನೆಯ ಕಾವಲನ್ನು ಮತ್ತಷ್ಟು ಬಿಗಿಮಾಡಿದನು. ಎಚ್ಚಮ್ಮನು ಅರಸನನ್ನು ಸೆರೆಮನೆಯಿಂದ ಬಿಡಿಸುವುದಕ್ಕೆ ಹಂಚಿಕೆ ಹಾಕಿದನು. ಕೋಟೆಯ ಹೊರಗಣಿಂದ ಸೆರೆಮನೆಯ ವರೆಗೂ ನೆಲ ದಾರಿಯೊಂದನ್ನು ಮಾಡುವಂತೆ ತನ್ನ ಸೈನಿಕರಲ್ಲಿಯ ಇಪ್ಪತ್ತು ಜನರನ್ನು ನಿಯಮಿಸಿದನು. ಅವರು ಕೋಟೆಯೊಳಗೆ ಹೋಗಿ ಜಗರಾಯನ ದಂಡಿನಲ್ಲಿ ಸೇರಿ ನೆಲದಾರಿಯನ್ನು ಮಾಡಿದರು. ಆ ನೆಲದಾರಿಯಿಂದಲೇ ಸೆರೆಮನೆಯನ್ನು ಪ್ರವೇಶಿಸಿ ಅರಸನಿಗೆ ಪ್ರಣಾಮ ಮಾಡಿ ಎಚ್ಚಮ್ಮನು ಕೊಟ್ಟ ಪತ್ರವನ್ನೊಪ್ಪಿಸಿದರು. ಆ ನೆಲದಾರಿಯಿಂದ ಅರಸನೂ ಅವನ ಕುಟುಂಬದವರೂ ಪಾರಾಗಿ ಬರಬೇಕೆಂದು ಆ

ಪತ್ರದಲ್ಲಿ ಬರೆದಿದ್ದಿತು. ಅರಸು ಅದಕ್ಕೆ ಒಪ್ಪಿದ್ದನು. ಆದರೆ ಆವನ ದುರ್ದೈವವು ಹಾಗೆ ಮಾಡಗೊಡಲಿಲ್ಲ. ಅಂದು ರಾತ್ರಿಯಲ್ಲಿ ನೆಲ ಕುಸಿದು ಪಹರೆ ಮಾಡುವವನೊಬ್ಬನ ಕಾಲು ತೆಗ್ಗಿನಲ್ಲಿ ಸಿಕ್ಕಿತು. ಅದಾಗ ಆ ಸ್ಥಳದಲ್ಲಿ ಅಗೆದು ನೋಡಲು ನೆಲದಾರಿ! ಅದು ಎಲ್ಲಿಗೆ ಹೋಗಿದೆಯೆಂಬುದನ್ನು ಪರೀಕ್ಷಿಸುವಸಲುವಾಗಿ ಅದರಗುಂಟ ಹೋಗಿ ನೋಡಿದರು. ನೆಟ್ಟಗೆ ಸೆರೆಮನೆಗೆಯೆ ಹೋಯಿತು. ಈ ಸುದ್ದಿ ಜಗರಾಯನಿಗೆ ತಿಳಿಯಿತು. ಆತನು ಅರಸನನ್ನು ಬೇರೆಕಡೆಗೆ ಹೆಚ್ಚು ಇಕ್ಕಟ್ಟಾದ ಸ್ಥಳದಲ್ಲಿ ಇಟ್ಟು ಕಾವಲಿರಿಸಿದನು. ಹೀಗಾಗಿ ಎಚ್ಚಮ್ಮನ ಪ್ರಯತ್ನವೊಂದು ನಿಷ್ಫಲವಾಯಿತು.

ಎಚ್ಚಮ್ಮನು ಅಷ್ಟಕ್ಕೆಯೆ ಬಿಡಲಿಲ್ಲ. ತನ್ನ ಪ್ರಯತ್ನ ನಡಿಸಿಯೇ ಇದ್ದನು. ಲಂಚಕೊಟ್ಟು ಕೋಟೆಯಲ್ಲಿಯ ಅಧಿಕಾರಿಯೊಬ್ಬನನ್ನು ಒಡಿಸಿಕೊಂಡನು. ಜಗರಾಯನು ತನ್ನ ಸೇನೆಯೊಂದಿಗೆ ಹೊರಗೆ ಹೋದ ಹೊತ್ತು ಸಾಧಿಸಿ ಆ ಅಧಿಕಾರಿಯು ಕೋಟೆಯ ಕಾವಲಿನವರನ್ನು ಕೊಂದು ಬೇಗ ಬರುವುದಾಗಿ ಎಚ್ಚಮ್ಮನಿಗೆ ತಿಳಿಸಿದನು. ಆದರೆ ಎಚ್ಚಮ್ಮನು ಬರುವಷ್ಟರಲ್ಲಿ ಜಗರಾಯನು ಹಿಂದಿರುಗಿ ಸೇನೆಯೊಡನೆ ಬಂದು ಆ ಅಧಿಕಾರಿಯನ್ನು ಕೊಂದುಹಾಕಿದನು. ಇಷ್ಟಕ್ಕೆಯೆ ಬಿಡಲಿಲ್ಲ. ಇದೆಲ್ಲವೂ ಈ ಅರಸನ ಸಲುವಾಗಿ ಆಗುತ್ತಿದೆಯೆಂದು ಅರಸನನ್ನೂ ಅವನ ಕುಟುಂಬದವರೆಲ್ಲರನ್ನೂ ಕೊಲ್ಲಿಸಿದನು.

ಈ ಕೊಲೆಯಿಂದ ಅನೇಕ ಸರದಾರರ ಮನಸು ತಿರುಗಿತು. ಅವರು ಬಂದು ಎಚ್ಚಮ್ಮನನ್ನು ಕೂಡಿದರು. ಅವನ ಬಲವು ಬೆಳೆಯಿತು. ಅದರಿಂದವನು ಕೋಟೆಗೆ ಮುತ್ತಿಗೆ ಹಾಕಿ ಒಳನುಗ್ಗಿ ಜಗರಾಯನ ಮರಿಮಗನನ್ನು ಸಿಂಹಾಸನದಿಂದ ತಳ್ಳಿ ಸೆರೆಸಿಕ್ಕ ಶ್ರೀರಂಗರಾಯನ ಮಗನಾದ ವೆಂಕಟಪತಿರಾಯನನ್ನು

ಪಟ್ಟಕ್ಕೆ ಕುಳ್ಳಿರಿಸಿದನು. (೧೬೨೬).

ಈ ಮನೆತನದ ಬಡಿದಾಟದಲ್ಲಿ ವಿಜಯನಗರದ ಮಾಂಡಲಿಕರೆಂದೆನಿಸಿಕೊಂಡುಳಿದ ಬೇರೆ ಹಲವರೂ ಸ್ವತಂತ್ರರಾದರು. ವೆಂಕಟಪತಿರಾಯನಾಗಲಿ ಅವನ ತರುವಾಯ ಬಂದ ಶ್ರೀರಂಗರಾಯನಾಗಲಿ ಹೆಸರಿಗೆ ಮಾತ್ರ ಅರಸರಾಗಿ ಆಳಿದರು. ೧೬೬೪ರ ವರೆಗೆ ಎಂದರೆ ರಾಕ್ಷಸತಂಗಡಿಗಿಯ ಕಾಳಗವಾದ ಮೇಲೆ ಒಂದು ನೂರು ವರ್ಷಗಳ ವರೆಗೆ ವಿಜಯನಗರ ರಾಜವಂಶದ ಹೆಸರು ನಡೆಯಿತು. ಮುಂದೆ ಹಿಂದೂ ದೇಶದಲ್ಲಿ ನಡೆದ ಮರಾಟಿಗರ, ಮೈಸೂರರಸರ, ಇಂಗ್ಲಿಷರ ಪ್ರಾಬಲ್ಯದಲ್ಲದು ಎಲ್ಲಿಯೋ ಅಡಗಿ ಹೋಯಿತು. ಇಲ್ಲಿ ನೆನಪಿಡತಕ್ಕ ಇನ್ನೊಂದು ಮಾತೆಂದರೆ ಇಂಗ್ಲಿಷರು ಮದ್ರಾಸಿನ ಹತ್ತಿರ ಫೋರ್ಟ ಸೆಂಟ ಜಾರ್ಜ' ಎಂಬ ಕೋಟೆಯನ್ನು ಕಟ್ಟಲು ಸ್ಥಳಪಡೆದುದು ಚಂದ್ರಗಿರಿಯ ಅರಸರಿಂದಲೆ.

ವಿಜಯನಗರದ ಈ ಅರವೀಡು ರಾಜವಂಶದವರು ಈಗಲೂ ವಿಜಯನಗರ ಸಾಮ್ರಾಜ್ಯದ ಮೂಲಸ್ಥಾನವಾದ ಆನೆಗುಂದಿಯ ಚಿಕ್ಕ ಪ್ರದೇಶಕ್ಕೆ ಒಡೆಯರಾಗಿ ಜಹಗೀರಿಯನ್ನನುಭವಿಸುತಿರುವರು. ಅವರ ವಂಶಾವಳಿಯನ್ನು ಕೊನೆಗೆ ಕೊಟ್ಟಿದೆ. ಅದು ಆ ಮನೆತನದ ಈಗಿನರಸಾದ ಶ್ರೀರಂಗರಾಯ (ಪಂಪಾಪತಿಯರಾಯ) ನಿಂದ ಸಿವೆಲ್‌ರವರಿಗೆ ದೊರೆಯಿತಂತೆ. ವಿಜಯನಗರದ ರಾಜವಂಶವೊಂದು ಈಗಲೂ ನಡೆದುಬಂದುದು ಕನ್ನಡಿಗರಿಗೊಂದು ಅಭಿಮಾನದ ಸಂಗತಿ! ಕನ್ನಡಿಗರು ಆ ಅಭಿಮಾನಪೂರಿತದೃಷ್ಟಿಯಿಂದಲೇ ಆ ಅರಸು ಮನೆತನದ ಕಡೆಗೆ ನೋಡುತಿರುವರು. ಅರಸು ಮನೆತನದವರಾದರೂ ತಮ್ಮ ಹಿಂದಿನ ಉಜ್ವಲ ಇತಿಹಾಸವನ್ನು ಪ್ರಸಿದ್ಧಪಡಿಸಲು ತಕ್ಕಷ್ಟು ನೆರವಾಗಿರುವರು.

# ೧೨ ರಾಜ್ಯವ್ಯವಸ್ಥೆ.

ಇಲ್ಲಿಯವರೆಗೂ ರಾಜವಂಶದವರ ಚರಿತ್ರೆಯನ್ನು ಮಾತ್ರ ಹೇಳಿದೆವು. ಆದರೆ ಅವರ ರಾಜ್ಯಪದ್ಧತಿ? ಅದೂ ಒಂದು ಮಾದರಿ ತೆಗೆದುಕೊಳ್ಳುವಂತಹದೆ. ಹೇಳಿ ಕೇಳಿ ಅದು ರಾಜಸತ್ತೆಯ ಕಾಲ. ಜಗತ್ತಿನಲ್ಲಿ ಈಗ ಆದೆಲ್ಲಿಯೂ ಪ್ರಜಾಪ್ರತಿನಿಧಿಪದ್ಧತಿ ತಲೆಯೆತ್ತಿದೆ. ರಾಜನೊಬ್ಬನ ಸತ್ತೆಯಾದರೇನು ಪ್ರಜಾಪ್ರತಿನಿಧಿಗಳನೇಕರ ಸತ್ತೆಯಾದರೇನು ಎಲ್ಲಿಯವರೆಗವು ಬಹುಜನ ಸಮಾಜದ ಕಲ್ಯಾಣಚಿಂತನೆ ಮಾಡುತ್ತಿರುವುವೊ ಅಲ್ಲಿಯವರೆಗೆ ಒಂದೆಯೆ. ಅದಾವಾಗ ಬಹುಜನ ಸಮಾಜವನ್ನು ಹತ್ತಿಕ್ಕಿ ಮನಬಂದುದನ್ನೇ ಮಾಡತೊಡಗುವುವೊ ಆವಾಗ ಅವುಗಳ ನಾಶವು ಕಟ್ಟಿಟ್ಟುದೆ. ಹಿಂದೂ ದೇಶದಲ್ಲಾದ ರಾಜಮಹಾರಾಜರು ಪ್ರಜೆಗಳ ಕಲ್ಯಾಣ ಚಿಂತನೆಯನ್ನು ತಮ್ಮ ಕಣ್ಣು ಮುಂದಿಟ್ಟುಕೊಂಡಿರುತಿದ್ದರು. ದುಷ್ಟರಾಜನು ಎಲ್ಲಿಗೊ ಒಬ್ಬ ಆಗಿ ಹೋದನು ಅದರಿಂದಲೇ ಹಿಂದುಗಳು ಅರಸು ದೇವಾಂಶವೆಂದು ತಿಳಿದು ಗೌರವ ಕೊಡುತ್ತ ಬಂದುದು. ವಿಜಯನಗರದ ರಾಜರು ಹಾಗೆಯೆ ಪ್ರಜೆಗಳಿಗೆ ನ್ಯಾಯ ಕೊಡುವುದರಲ್ಲಿ ದಕ್ಷರಿದ್ದರು. ಪ್ರತಿ ದಿವಸ ಬೆಳಗಿನಲ್ಲಿ ಓಲಗಕ್ಕೆ ಬಂದು ತಾವೇ ಪ್ರಜೆಗಳ ಸುಖದುಃಖಗಳನ್ನು ಕೇಳಿಕೊಳ್ಳುವರು. ಸರಿಯಾಗಿ ನ್ಯಾಯಕೊಡುವರು.

ಅರಸನ ಕೈಕೆಳಗೆ ಎಂಟುಜನ ಮಂತ್ರಿಗಳಿರುತಿದ್ದರು. ಅವರಲ್ಲೊಬ್ಬ ಮುಖ್ಯಮಂತ್ರಿ. ಅವನಿಗೆ ಮಹಾಪ್ರಧಾನನೆಂಬ ಹೆಸರು. ಈ ಎಂಟುಜನ ಪ್ರಧಾನರೇ ಅರಸನ ಆಲೋಚನಾ ಸಭೆ. ಈ ಪ್ರಧಾನರ ಆಲೋಚನೆಯಂತೆಯೇ ರಾಜ್ಯಭಾರವು ನಡೆಯುತಿದ್ದಿತು. ಈ ಅಷ್ಟ ಪ್ರಧಾನರ ಪದ್ಧತಿಯು ಬಹುದಿವಸಗಳಿಂದ ನಮ್ಮ ದೇಶದಲ್ಲಿ ನಡೆದು

ಬಂದಿದೆ. ಈ ಅಷ್ಟ ಪ್ರಧಾನರು ತಮ್ಮ ಸ್ವಾರ್ಥವನ್ನೇ ನೋಡು ತಿರಲಿಲ್ಲ. ಅರಸು ಅದೆಲ್ಲಿ ಪ್ರಜೆಗಳ ಅಕಲ್ಯಾಣವನ್ನು ಚಿಂತಿಸುತಿದ್ದನೋ ಅಲ್ಲಿ ಅವನಿಗೆ ವಿರೋಧಮಾಡುತಿದ್ದರು. ಇಂತಹ ಸರಕಾರವು ಈಗಿನ ಪ್ರಜಾಪ್ರತಿನಿಧಿ ಸಂಸ್ಥೆಗಳೆನಿಸಿಕೊಂಡವುಗಳಿಗಿಂತಲೂ ಉತ್ತಮವಿರುವುದರಲ್ಲಿ ಆಶ್ಚರ್ಯವೇನು ?

ರಾಜ್ಯದಲ್ಲಿ ಕೆಲವು ಭಾಗಗಳನ್ನು ಮಾಡಿದ್ದರು. ಪ್ರತಿಯೊಂದು ಭಾಗದ ಮೇಲೆ ಒಬ್ಬೊಬ್ಬ ದಂಡನಾಯಕನಿರುತಿದ್ದನು. ಆಯಾ ಭಾಗದಲ್ಲಿರುವ ಸಾಮಂತರಾಜರ ಮೇಲೆ ಈ ದಂಡನಾಯಕನೇ ವಿಚಾರಕನು. ಆದರಿಂದೀತನಿಗೆ "ಮಹಾಸಾಮಂತಾಧಿಪತಿ" ಎಂದು ಹೆಸರಿದ್ದಿತು. ಕೆಲವೆಡೆ "ಹೆಗ್ಗಡೆ" ಎಂದೂ ಎನ್ನುತಿದ್ದರು. ಈ ಮಹಾಸಾಮಂತಾಧಿಪತಿಗಳು ಬಹುತರವಾಗಿ ಅರಸು ಮನೆತನಕ್ಕೆ ಹೊಂದಿದವರೇ ಇರುತಿದ್ದಂತೆ ತೋರುವುದು.

ಸಾಮಂತರಾಜರು ತಮ್ಮಷ್ಟಕ್ಕೆ ತಾವು ಸ್ವತಂತ್ರರು. ತಮ್ಮ ನಾಡಿನ ಕಂದಾಯದ ಕೆಲಭಾಗವನ್ನು ಅರಸರಿಗೆ ಸಲ್ಲಿಸಿದರೆ ತೀರಿತು. ಇವರು ಸ್ವತಂತ್ರವಾಗಿ ಸೈನ್ಯವನ್ನು ಸಹ ಇಡುತಿದ್ದರು. ಸಾಮ್ರಾಜ್ಯದ ಮೇಲೆ ಪ್ರಸಂಗ ಬಂದಾಗ ತಮ್ಮ ಸೈನ್ಯವನ್ನೆಲ್ಲ ತೆಗೆದುಕೊಂಡು ಹೋಗುತಿದ್ದರು.

ಪ್ರತಿಯೊಂದು ದೊಡ್ಡ ಭಾಗಕ್ಕೆ ನಾಡು ಎಂದು ಹೆಸರು. ಅವನ್ನೂ ಮತ್ತೆ ಗಡಿ, ಹೋಬಳಿ ಎಂದು ವಿಭಾಗಿಸಿದ್ದರು. ಒಂದು ಹೋಬಳಿಯಲ್ಲಿ ೧೦ ರಿಂದ ೪೦ ಗ್ರಾಮಗಳಿರುತಿದ್ದುವು. ಇಂತಹ ಕೆಲವು ಹೋಬಳಿಗಳು ಕೂಡಿದರೆ (೪-೧೦) ಒಂದು ಗಡಿಯಾಗುತಿದ್ದಿತು. ಹತ್ತಿಪ್ಪತ್ತು ಗಡಿ ಕೂಡಿ ಒಂದು ನಾಡು. ನಾಡೆಂಬುದನ್ನು ಈಗಿನ ಪ್ರಾಂತಕ್ಕೂ ಗಡಿ ಹೋಬಳಿಗಳನ್ನು, ಜಿಲ್ಲೆ

ತಾಲೂಕುಗಳಿಗೂ ಹೋಲಿಸಬಹುದು. ಪ್ರತಿಯೊಂದು ಊರಲ್ಲಿ ಗೌಡ, ಶಾನಭಾಗ, ಜೋಯಿಸ, ಬುದ್ಧಿವಂತ, ಬಣಗಾರ, ಬಡಿಗ, ಕಮ್ಮಾರ, ಓಲೆಕಾರ ಮೊದಲಾಗಿ ೧೨ ಜನ ಆಯಗಾರರಿರುತಿದ್ದರು. ಇವರ ಸಂಬಳವೆಂದರೆ ರೈತರು ಕೊಡುವ ಆಯ. ಈ ಹನ್ನೆರಡು ಜನ ಆಯಗಾರರಿಂದ ಊರ ಕೆಲಸಗಳೆಲ್ಲವೂ ಆಗುತಿದ್ದುವು. ಊರಲ್ಲಿ ಏನೊಂದು ವ್ಯಾಜ್ಯ ಬಂದರೆ ಇವರೆಲ್ಲರೂ ಕೂಡಿ ತೀರಿಸುತಿದ್ದರು. ವ್ಯಾಜ್ಯದ ಮೂಲವನ್ನೇ ಅರಿತ ಈ ಪಂಚರು ಸಾಕ್ಷಿ ಪುರಾವೆಗಳ ಮೇಲೆ ಅವಲಂಬಿಸಿ ಕೂಡಬೇಕಾಗುತಿದ್ದಿಲ್ಲ. ಅವರು ಕೊಟ್ಟ ನಿರ್ಣಯವು ಸ್ವಾಭಾವಿಕವಾಗಿ ೧೦೦ ರಲ್ಲಿ ೯೯ ಪಾಲು ಸರಿಯಾಗಿಯೇ ಇರುತಿದ್ದಿತೆಂಬುದನ್ನು ಬೇರೆ ಹೇಳಬೇಕೆ? ಅಂತಹ ಗ್ರಾಮ ಪಂಚಾಯತಿಯ ಪದ್ಧತಿಯನ್ನು ಸ್ಥಾಪಿಸಬೇಕೆಂದು ಇದೀಗ ಮತ್ತೆ ಪ್ರಯತ್ನ ನಡೆದಿದೆ. ಆದರೆ ಆವಕಾರಣದಿಂದಲೊ ಅದು ಆಗಿನಂತೆ ಫಲಪ್ರದವಾದಂತೆ ಕಂಡುಬರುವುದಿಲ್ಲ

ರೈತರು ಭೂಮಿಯ ಆದಾಯದ ಆರನೆಯ ಪಾಲನ್ನೊ ಕೆಲವೊಂದು ಪಾಲನ್ನೊ ನಾಣ್ಯದ ರೂಪದಿಂದ ಇಲ್ಲವೆ ಕಾಳಿನ ರೂಪದಿಂದ ಕಂದಾಯವಾಗಿ ಸಲ್ಲಿಸುತಿದ್ದರು. ಒಟ್ಟಾಗಿ ಆ ಸಾಮ್ರಾಜ್ಯದಲ್ಲಿ ಪ್ರಜೆಗಳೆಲ್ಲರು ಸುಖದಿಂದ ಬಾಳುವೆಮಾಡುತಿದ್ದರೆಂದು ಹೇಳಬಹುದು. ನಾವು ಸ್ವರಾಜ್ಯ ಎಂದು ಕೂಗುತಿರುವೆವಲ್ಲ ಆ ಸ್ವರಾಜ್ಯದಲ್ಲಿ ಸುಖವೆಷ್ಟೊ ದುಃಖವೆಷ್ಟೊ ಇನ್ನೂ ನಾವು ಕಂಡುಂಡವರಲ್ಲ. ಅದರ ಕಲ್ಪನೆಯೂ ಚೆನ್ನಾಗಿ ಆಗಿಲ್ಲ. ಆದರೆ ರಾಮರಾಜ್ಯವೆಂದರೆ ಎಂತಹದೆಂಬುದರ ಕಲ್ಪನೆ ಚೆನ್ನಾಗಿ ಇದೆ. ವಿಜಯನಗರ ಸಾಮ್ರಾಜ್ಯವು ಆ ರಾಮರಾಜ್ಯವಾಗಿತ್ತೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

---

# ೧೩ ಜನಜೀವನ.

ವಿಜಯನಗರ ಸಾಮ್ರಾಜ್ಯದ ರಾಜಕೀಯ ಇತಿಹಾಸವನ್ನು ಇಲ್ಲಿಯವರೆಗೆ ಬರೆದುದಾಯಿತು. ಇಷ್ಟರಿಂದಲೆ ಆ ಸಾಮ್ರಾಜ್ಯದ ಇತಿಹಾಸವು ಪೂರ್ಣವಾದಂತಾಗಲಿಲ್ಲ. ಆ ಕಾಲದ ಜನಜೀವನವನ್ನೂ ಅರಿಯಬೇಕಾದುದವಶ್ಯ. ಪರದೇಶದವರು ಬರೆದಿಟ್ಟ ಚರಿತ್ರೆಗಳಿಂದ ಅದನ್ನೂ ತಕ್ಕಷ್ಟು ಅರಿತುಕೊಳ್ಳಬಹುದಾಗಿದೆ. ಅದನ್ನು ಸಂಗ್ರಹರೂಪವಾಗಿ ಹೇಳಿದೆಯಿಲ್ಲಿ.

ಸಾಮ್ರಾಜ್ಯದಲ್ಲಿರುವ ಜನರ ವರ್ಣ ರೂಪ ನಿಲುವಿಕೆಗಳನ್ನು ಕುರಿತು ಬೇರೆಯಾಗಿ ಹೇಳಬೇಕಾಗಿಲ್ಲ. ಇನ್ನುಳಿದುದು ಆಹಾರವಿಹಾರ ಆಚಾರವಿಚಾರಗಳ ವಿಷಯ. ಆಹಾರ ವಿಹಾರಗಳಲ್ಲಿಯೂ ಆಚಾರ ವಿಚಾರಗಳಲ್ಲಿಯೂ ಪರಂಪರೆಯನ್ನು ಕಾಯ್ದುಕೊಳ್ಳುವುದರಲ್ಲಿ ಹಿಂದುಗಳನ್ನು ಸರಿಗಟ್ಟುವವರು ಜಗತ್ತಿನಲ್ಲಿ ಮತ್ತಾರೂ ಇಲ್ಲ. ಅದರಿಂದ ಆ ಕಾಲದ ಆಚಾರವಿಚಾರ ಆಹಾರ ವಿಹಾರಗಳ ಬಹು ಭಾಗವು ಇನ್ನೂವರೆಗೆ ನಡೆದು ಬಂದಿದೆ. ಶಾಕಾಹಾರಿಗಳಿಗೆ ಜೋಳ, ಅಕ್ಕಿ, ಅವರೆ, ರಾಗಿ, ಹೆಸರು ಮೊದಲಾದ ಕಾಳುಗಳಿಂದ ಮಾಡಿದ ಅಡಿಗೆಯೇ ಮುಖ್ಯ ಆಹಾರ. ಆದರೆ ಮುಸಲ್ಮಾನರಲ್ಲದೆ ಇನ್ನಿತರರು ಗೋದಿಯನ್ನು ತಿನ್ನುತಿದ್ದಿಲ್ಲವೆಂದು ಪೀಜನು ಹೇಳಿದ್ದಾನೆ. ಈಗ ಶಾಕಾಹಾರಿಗಳ ಆಹಾರದಲ್ಲಿ ಗೋದಿಯೂ ಸೇರಿದೆ. ಬ್ರಾಹ್ಮಣರನ್ನುಳಿದಿತರರು ಮಾಂಸವನ್ನು ಸೇವಿಸುತಿದ್ದರು. ಆದರೆ ಎತ್ತು ಆಕಳು ಹಂದಿಗಳ ಮಾಂಸವನ್ನು ಮುಟ್ಟುತಿರಲಿಲ್ಲ. ತಾಂಬೂಲ ಹಾಕಿಕೊಳ್ಳುವ ರೂಢಿಯು ಬಹಳವಾಗಿದ್ದಿತು. ಇಂದಿಗೂ ವಿಜಯನಗರದ ಭಾಗದಲ್ಲಿ ವಾಸಿಸುವ ಜನರಲ್ಲಿ ಈ ಎಲೆ ಅಡಿಕೆ ಹಾಕಿ

ಕೊಳ್ಳುವುದು ಬೇರೆ ಕಡೆಗಿಂತ ಹೆಚ್ಚಾಗಿಯೇ ಇದೆ. ಆದರೆ ಮೊದಲಿಗಿಂತ ಇನ್ನೊಂದು ಪದಾರ್ಥವು ಹೆಚ್ಚಾಗಿದೆ. ಅದೆಂದರೆ ತಂಬಾಕು ಹಾಕಿಕೊಳ್ಳುವುದು.

ಕೋಟು ಪಾಟ್ಲೂನು ಹ್ಯಾಟು ಬೂಟು ಕಾಲುಚೀಲು ಮೊದಲಾದುವುಗಳೆಲ್ಲ ಪಾಶ್ಚಾತ್ಯರ ಸಂಘಟನೆಯಿಂದ, ಅದೂ ನಮ್ಮ ಹಿಂದೂ ಸಮಾಜದ ಮೇಲಾದ ಅವರ ರಾಜಕೀಯ ವರ್ಚಸ್ಸಿನಿಂದ ಬಂದುವು. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಅವರ ಕಾಲು ಆದಾಗಲೆ ಹಿಂದುಸ್ಥಾನಕ್ಕೆ ಹತ್ತಿದ್ದಿತೆಂದ ಮೇಲೆ ಇವುಗಳ ಸಂಪರ್ಕವು ಹಿಂದುಗಳಿಗೆ ಇದ್ದಿರಲೇ ಇಲ್ಲವೆಂದು ಬೇರೆಯಾಗಿ ಹೇಳಬೇಕಾಗಿಲ್ಲ. ಆ ಕಾಲದಲ್ಲಿ ಸಾಮಾನ್ಯಜನತೆಯ ಉಡಿಗೆಯೆಂದರೆ ಒಂದು ನಡುಸುತ್ತು ಮಾತ್ರ; ಅದಲ್ಲದೆ ಮತ್ತೊಂದು ಬಟ್ಟೆಯಿರುತಿದ್ದಿಲ್ಲ. ವಿಜಯನಗರದ ಭಾಗದಲ್ಲಿ ಈಗಲೂ ಈ ನಡುಸುತ್ತಿನ ಪ್ರಚಾರವಿದೆ. ಅರಸನ ತಲೆಯ ಮೇಲೆ ಎರಡುಗೇಣು ಎತ್ತರವಾದ ಕಿನಖಾಪಿನ ಜರದ ಟೊಪ್ಪಿಗೆ ಇರುತಿದ್ದಿತು. ಇದು ಸಾಮಾನ್ಯ ಉಡಿಗೆ. ವಿಶೇಷ ಪ್ರಸಂಗಗಳಲ್ಲಿ ಸೆಟ್ಟಿಸಾವುಕಾರರು ಸರದಾರ ಸಾಮಂತರು ನಿಲುವಂಗಿಗಳನ್ನು ಧರಿಸುತಿದ್ದರು. ಹೆಚ್ಚು ಹೆಚ್ಚು ಶ್ರೀಮಂತರಿದ್ದಂತೆ ಅವರು ಧರಿಸುವ ನಿಲುವಂಗಿಗಳು ಹೆಚ್ಚು ಹೆಚ್ಚು ಬೆಲೆಯುಳ್ಳವುಗಳಿರುತಿದ್ದುವು. ಅವುಗಳ ಮೇಲೆ ಜರತಾರಿಯ ಕಲಾಕುಸುರಿಯ ಕೆಲಸವು ಮಾಡಲ್ಪಡುತಿದ್ದಿತು. ಸಾಮಾನ್ಯಜನತೆಯ ಕಾಲುಗಳಲ್ಲಿ ಕಾಲುಮರೆಗಳಿರುತಿದ್ದುವು. ದೊಡ್ಡವರ ಬೆಟ್ಟಿಗಾಗಲಿ ದೇವರಿಗಾಗಲಿ ಹೋಗಬೇಕಾದರೆ ಬರಿಗಾಲಿನಿಂದ ಹೋಗುತಿದ್ದರು. ಸ್ತ್ರೀಯರುಡುವುದು ಸೀರೆಗಳನ್ನು. ಬೆಲೆಬಾಳುವ ಜರತಾರಿಯ ರೇಶಿಮೆಯ ಸೀರೆಗಳೂ ಇರುತಿದ್ದುವು. ಸ್ತ್ರೀಪುರುಷರಿಬ್ಬರ ಮೈಮೇಲಿನ ಆಭರಣಗಳಂತೂ ಹಲವು ತರದವು. ಹೂಗಳನ್ನು ಮುಡಿ

ಯುವುದೂ ವಿಶೇಷವಾಗಿದ್ದಿತು. ಗುಲಾಬಿಯ ಹೂಗಳು ಆ ಜನರಿಗೆ ಅನ್ನದಷ್ಟೇ ಆವಶ್ಯಕವೆನಿಸುತಿದ್ದುವೆಂದು ಅಬ್ದುಲ್ ರಝಾಕನು ಬರೆದಿರುವನು.

ಮನೆಗಳೆಲ್ಲ ಒಂದಂತಸ್ತಿನವು. ಅವೂ ಮಾಳಿಗೆಯ ಮನೆಗಳು. ಎತ್ತು ಆನೆ ಕುದುರೆಗಳೇ ಅವರ ವಾಹನ. ಸರದಾರ ಶ್ರೀಮಂತರು ಪಲ್ಲಕ್ಕಿ ಮೇಣೆಗಳಲ್ಲಿಯೂ ಕುಳಿತುಕೊಂಡು ಹೋಗುತಿದ್ದರು. ಗಂಡಸರು ತಮಗೆ ಮನಬಂದಷ್ಟು ಸ್ತ್ರೀಯರನ್ನು ಮದುವೆಯಾಗುತಿದ್ದರು. ಸರದಾರ ಸಾಮಂತರೂ ಅರಸುಮನೆತನದವರೂ ಹೆಂಡಿರು ಹೆಚ್ಚಿದ್ದಷ್ಟು ಭೂಷಣವೆಂದು ತಿಳಿಯುತಿದ್ದರು. ಗಂಡನು ಸಾಯಲು ಅವನೊಂದಿಗೆ ಹೆಂಡಿರು ಸತಿಹೋಗುವ ಸಂಪ್ರದಾಯವಿದ್ದಿತು. ತೆಲಗು ಜಾತಿಯವರು ಮೃತನಾದ ಗಂಡನ ಕೂಡ ಹೆಂಡತಿಯನ್ನೂ ಹೂಳುತಿದ್ದರು. ವೇಶ್ಯಾ ಪದ್ಧತಿಯೂ ಇದ್ದಿತು. ಸಭ್ಯರು ಪ್ರಮುಖ ಗೃಹಸ್ಥರು ಸಹ ವೇಶ್ಯೆಯರ ಮನೆಗಳಿಗೆ ಹೋಗಿ ತಾಂಬೂಲ ಸೇವಿಸಿ ಬರುತಿದ್ದರು. ಅದು ನಾಚಿಕೆಗೇಡೆಂದು ಯಾರೂ ತಿಳಿಯುತಿರಲಿಲ್ಲ. ವೇಶ್ಯೆಯರಲ್ಲದೆ ದೇವದಾಸಿಯರು ಇರುತಿದ್ದರು. ಈ ದೇವದಾಸಿಯರು ಲಗ್ನವಾಗುತಿರಲಿಲ್ಲ. ದೇವರ ಮುಂದೆ ಉತ್ಸವದ ದಿನಗಳಲ್ಲಿ ನೃತ್ಯ ಗಾಯನಗಳನ್ನು ಮಾಡುವುದೇ ಇವರ ಉದ್ಯೋಗ. ಅವರ ಸಂತತಿಯ ಪೋಷಣೆಯು ದೇವಸ್ಥಾನಗಳಿಂದಲೇ ನಡೆಯುತಿದ್ದಿತು.

ದಕ್ಷಿಣದ ದ್ರಾವಿಡರ ಸಂಸ್ಕಾರದಿಂದಲೂ ಬೌದ್ಧ ಧರ್ಮದ ಪ್ರಭಾವದಿಂದಲೂ ಹಿಂದೂ ಧರ್ಮದಲ್ಲಿ ಮೂರ್ತಿ ಪೂಜೆಯು ಇಣಿಕಿ ಹಾಕಿತಷ್ಟೆ. ಅದರ ಪ್ರಸಾರವು ಹೆಚ್ಚಾಗುತ್ತ ಹೋದುದರಿಂದ ಆ ಕಾಲದಲ್ಲಿ ಎಲ್ಲಿ ನೋಡಿದಲ್ಲಿ ಗುಡಿಗುಂಡಾರಗಳು ದೃಷ್ಟಿಗೆ ಬೀಳುತಿದ್ದುವು. ವಿಜಯನಗರದಲ್ಲಂತೂ ಎಲ್ಲಿನೋಡಿದಲ್ಲಿ ಈಗಲೂ ಅಲ್ಲಲ್ಲಿ ಶೈವ

ವೈಷ್ಣವ ಧರ್ಮದವರ ಗುಡಿಗಳು ದೃಷ್ಟಿಗೆ ಬೀಳುತ್ತವೆ. ದೇವತೆಗಳಿಗೂ ಕೆರೆಬಾವಿಗಳಿಗೂ ಬಲಿಕೊಡುವ ಪದ್ಧತಿಯಿದ್ದಿತು. ನರಬಲಿಯೂ ರೂಢವಾಗಿದ್ದಿತಾಗ. ಕೃಷ್ಣದೇವರಾಯನು ವಿಜಯನಗರದಲ್ಲಿ ಕಟ್ಟಿಸುತಿದ್ದ ಕೆರೆಯು ಒಡ್ಡು ಒಡೆದು ಹೋಗುತಿದ್ದುದರಿಂದ ದೇವರಿಗೆ ಕೌಲು ಕಟ್ಟಿಸಿ ೬೦ ಜನಸ್ತ್ರೀಪುರುಷರನ್ನೂ ಕುದುರೆ ಕುರಿ ಕೋಣಗಳನ್ನೂ ಬಲಿಕೊಟ್ಟನಂತೆ. ದೇವರ ರಥವು ಎಳೆಯುತ್ತಿರುವಾಗ ಧಾರ್ಮಿಕ ಭಾವನೆಯಿಂದ ಅನೇಕರು ಆ ರಥದ ಗಾಲಿಯ ಬುಡದಲ್ಲಿ ಬಿದ್ದು ಪ್ರಾಣಕೊಡುತಿದ್ದರು. ಮತ್ತೆ ಕೆಲವರು ತಮ್ಮ ದೇಹದಲ್ಲಿ ಕಬ್ಬಿಣದ ಕೊಂಡೆಗಳನ್ನು ಸಿಕ್ಕಿಸಿಕೊಂಡು ಹಗ್ಗದಿಂದ ರಥದ ಕಂಬಗಳಿಗೆ ಕಟ್ಟಿಕೊಳ್ಳುತಿದ್ದರು. ಹೀಗೆ ದೇವರ ಮುಂದೆ ಪ್ರಾಣಕೊಡುವುದೂ ರಥಕ್ಕೆ ಕಟ್ಟಿಕೊಳ್ಳುವುದೂ ಪುಣ್ಯಕರ ಕೆಲಸವೆಂದು ತಿಳಿಯುತಿದ್ದರಾಗ.

ಜನರಲ್ಲಿ ರಾಜನಿಷ್ಠೆಯು ವಿಶೇಷವಾಗಿದ್ದಿತು. ಯಾರಾದರೂ ಬಂದು ಚೆಷ್ಟೆಗಾಗಿ ಒಬ್ಬನ ಮುಂದೆ ಅರಸನು ನಿನಗೆ ಬೆನ್ನಮೇಲೆ ಕಲ್ಲು ಹೊತ್ತುಕೊಂಡು ನಿಲ್ಲುವ ಶಿಕ್ಷೆ ವಿಧಿಸಿರುವನೆಂದು ಹೇಳಿದರೊ ತಡವಿಲ್ಲದೆ ಕಲ್ಲುಗಳನ್ನು ಹೊತ್ತುಕೊಂಡು ನಿಲ್ಲುತ್ತಿದ್ದರೆಂದೂ ತಿರುಗಿ ಆತನು ತಾನು ಚೇಷ್ಟೆಗೆಂದು ಹಾಗೆ ಹೇಳಿದುದೆಂದು ತಿಳಿಸಿದಾಗಲೇ ಬೆನ್ನಮೇಲಿನ ಕಲ್ಲು ಇಳಿಸುತಿದ್ದರೆಂದೂ ಒಬ್ಬ ಪ್ರವಾಸಿಯು ಬರೆದಿಟ್ಟಿರುವನು. ಎಂದರೆ ರಾಜನಿಷ್ಠೆಯು ಅಷ್ಟು ಬೇರೂರಿದ್ದಿತೆಂದು ಹೇಳುವುದು ಇದರ ತಾತ್ಪರ್ಯ. ವಿಜಯನಗರದ ಅರಸರ ಸಲುವಾಗಿ ಅನೇಕರು ತಮ್ಮ ಜೀವಕ್ಕೆ ಎರವಾದ ಸಂಗತಿ ಹಿಂದೆ ತಿಳಿಸಿಯೇ ಇದೆ. ಅರಸರಾದರೂ ಪ್ರಜೆಗಳನ್ನು ಆ ರೀತಿಯಲ್ಲಿಯೇ ಗೌರವಿಸುತಿದ್ದರು ದಾನಧರ್ಮಗಳನ್ನು ಮಾಡುತಿದ್ದರು ಒಬ್ಬರಿಗೂ ಅನ್ಯಾಯವಾಗದಂತೆ ಎಚ್ಚರತೆಗೆದುಕೊಳ್ಳುತಿದ್ದರು. ಮೋಸಕೊಲೆಕಳವುಗಳ

ಸುಳಿವೇ ಆ ರಾಜ್ಯದಲ್ಲಿರಲಿಲ್ಲ, ಬಹು ಬೆಲೆಬಾಳುವ ಮುತ್ತುರತ್ನಗಳನ್ನು ಬೀದಿಯಂಗಡಿಗಳಲ್ಲಿಟ್ಟು ವ್ಯಾಪಾರ ಮಾಡುತಿದ್ದರು.

ಆಗ ಈ ದೇಶದಲ್ಲಿ ಮುದ್ರಣದ ಕೆಲಸವು ನಡೆಯುತಿರಲಿಲ್ಲ. ಕಾಗದಗಳೂ ಬಳಕೆಯಲ್ಲಿದ್ದಿಲ್ಲ. ಖಂಬಾಯತದ ಜನರು ಮಾತ್ರ ಕಾಗದಗಳ ಮೇಲೆ ಬರೆಯುತಿದ್ದರು. ಉಳಿದೆಡೆಯಲ್ಲಿ ತಾಳೆಲೆಯ ಮೇಲೆಯೇ ಬರೆವ ರೂಢಿಯಿದ್ದಿತು. ನದಿಗಳನ್ನು ದಾಟಲು ದೋಣಿಗಳನ್ನು ಉಪಯೋಗಿಸುತಿದ್ದರು. ಆ ದೋಣಿಗಳಿಗೆ ಚರ್ಮದ ಹೊದಿಕೆಯಿರುತಿದ್ದಿತು. ಆನೆಗುಂದಿಯ ಮುಂದೆ ನದಿಯನ್ನು ದಾಟಲು ಈಗಲೂ ಇಂತಹ ದೋಣಿಗಳೇ ಇರುವವು. ಪರದೇಶದ ಕೂಡ ವ್ಯಾಪಾರವು ನಡೆಯುತಿದ್ದಿತು. ಅದೆಲ್ಲ ಸಮುದ್ರದಮಾರ್ಗವಾಗಿ. ಒಳದೇಶದ ವ್ಯಾಪಾರವು ಗೋಣಿಯ ಎತ್ತುಗಳ ಮೇಲೆ ನಡೆಯುತಿದ್ದಿತು.

ಜಾತಿಯು ಈಗಿನಂತೆ ಹುಟ್ಟನ್ನವಲಂಬಿಸಿರಲಿಲ್ಲ. ಬಾಹ್ಮಣನು ಲಿಂಗವಂತನಾಗಬಹುದು. ಲಿಂಗವಂತನು ಜೈನನಾಗಬಹುದು ಎಂದರೆ ಮತವೆಂಬುದು ಪರವನ್ನು ಸಾಧಿಸುವ ಒಂದು ಸಾಧನವಾಗಿದ್ದಿತು. ಪ್ರತಿಯೊಬ್ಬನು ತನಗೆ ಸರಿಬಂದ ಸಾಧನೆಯನ್ನು ಕೈಕೊಳ್ಳಬಹುದಾಗಿದ್ದಿತು. ಬೇರೆ ಬೇರೆ ಮತದವರಲ್ಲಿ ದ್ವೇಷಾಸೂಯೆಗಳಿರಲಿಲ್ಲ. ರಾಜರು ಅದಕ್ಕೆ ಎಡೆಗುಡುತಿರಲಿಲ್ಲ. ಮುಸಲ್ಮಾನರ ಉಪಟಳವನ್ನು ತಡೆಯುವುದಕ್ಕಾಗಿಯೇ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಾಗಿದ್ದಿತು. ಆ ಸಮ್ರಾಜರು ಅವರ ಉಪಟಳವನ್ನು ವಿರೋಧಿಸಿದರು. ಆದರೆ ಅವರ ಧರ್ಮಕ್ಕೆ ಎಂದಿಗೂ ಅಪಮಾನಮಾಡಲಿಲ್ಲ. ವಿಜಯನಗರದಲ್ಲಿಯ ಮುಖ್ಯಸ್ಥಳದಲ್ಲಿ ಹಿಂದುಗಳ ದೇವಾಲಯಗಳ ನೆರೆಯಲ್ಲಿ ಈಗಲೂ ಮಸೀದೆಯನ್ನು ಕಾಣಬಹುದು.

ಆ ಕಾಲದ ಜನತೆಯಲ್ಲಿ ಉತ್ಸಾಹವು ಪೂರ್ಣವಾಗಿದ್ದಿತು. ಉತ್ಸಾಹದಿಂದವರು ಪ್ರತಿಯೊಂದು ಕೆಲಸವನ್ನು ಮಾಡುತಿದ್ದುದರಿಂದಲೆ ಬಿರುಸುಕಲ್ಲನ್ನೂ ಮೇಣಕ್ಕಿಂತ ಮಿದುವುಮಾಡಿ ಶಿಲ್ಪಕಲೆಯಲ್ಲಿ ತಮ್ಮ ಚಾತುರ್ಯವನ್ನು ತೋರಿಸಿರುವರು. ಅವರು ನಮಗೆ ಬಿಟ್ಟು ಕೊಟ್ಟ ಗುಡಿಗುಂಡಾರಗಳೂ ಕೆರೆ ಕಾಲುವೆಗಳೂ ನೋಡ ಹೋದ ವರನ್ನು ೬೦೦ ವರ್ಷಗಳ ತರುವಾಯವೂ ಬೆರಗುಗೊಳಿಸುತ್ತ ನಿಂತಿರು ತ್ತವೆ. ಆ ಜೀರ್ಣ ಗುಡಿಗುಂಡಾರಗಳಿಂದಲೂ ಕೆರೆಕಾಲುವೆಗಳಿಂದಲೂ ನಾವು ಕನ್ನಡಿಗರು ಅಭಿಮಾನ ತಾಳುತಿರುವೆವು. ಆದರೇನು ? ಅವರಷ್ಟೇ ಉತ್ಸಾಹದಿಂದ ನಾವು ಕೆಲಸವನ್ನು ಕೈಕೊಂಡು ಅವರಂತೆ ಯೆ ನಮ್ಮ ಮುಂದಿನವರು ಅಭಿಮಾನ ತಾಳುವಂತಹ ಕಾರ್ಯಗ ಳನ್ನು ಮಾಡಿದಾಗಲೇ ಅದರ ಸಾರ್ಥಕ ! ಬರಿ ಅಭಿಮಾನದಿಂದಾ ಗುವುದೇನು ?

---

# ೧೪ ರಾಯರ ಕಾಲದ ವಾಙ್ಮಯ.

೧೪ ನೆಯ ಶತಮಾನದ ಪೂರ್ವಾರ್ಧದಲ್ಲಿ ದಕ್ಷಿಣಹಿಂದುಸ್ಥಾನದಲ್ಲಿ ಎತ್ತನೋಡಿದತ್ತ ಮುಸಲ್ಮಾನರ ಹಾವಳಿ ; ಹಾವಳಿ. ಪ್ರತಿಯೊಬ್ಬರಿಗೂ ಆ ಹಾವಳಿಯೊಳಗಿಂದ ತಾವು ಹೇಗೆ ಉಳಿದೇವೆಂಬ ಚಿಂತೆ. ಇಂತಹ ಸಮಯದಲ್ಲಿ ವಾಙ್ಮಯದ ಕಡೆಗೆ ಲಕ್ಷ್ಯವಾರದು ! ಆ ಹಾವಳಿಯಿಂದ ದೇಶವನ್ನು ರಕ್ಷಿಸುವುದಕ್ಕಾಗಿ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಾಯಿತು. ಮಹಮ್ಮದ ಬಿನ್ ತಘಲಖನ ತರುವಾಯ ಉತ್ತರದ ಮುಸಲ್ಮಾನರ ದಾಳಿಯು ನಿಂತು ಹೋಯಿತು. ಕಲಬುರ್ಗಿಯಲ್ಲಿ ಬಾಮನೀರಾಜ್ಯವು ಸ್ಥಾಪಿತವಾಯಿತು. ಬಾಮನೀ ಸುಲ್ತಾನನಾದ ಜಾಫರಖಾನನೂ ದೇಶದಲ್ಲಿ ಶಾಂತತೆ ನೆಲೆಗೊಳಿಸುವುದಕ್ಕಾಗಿ ಪ್ರಯತ್ನಿಸಿದನು. ಹೀಗಾಗಿ ಎಲ್ಲಕಡೆಯಲ್ಲಿ ಸುಖಶಾಂತಿಗಳು ತೋರಿದುವು.

ವಿದ್ಯಾರಣ್ಯರು ಧರ್ಮರಕ್ಷಣೆಗಾಗಿ ಸಾಮ್ರಾಜ್ಯವನ್ನು ಸ್ಥಾಪಿಸಿದುದಾಯಿತು. ಪರಧರ್ಮದವರಿಂದ ದೇಶವನ್ನು ರಕ್ಷಿಸಿದಷ್ಟಕ್ಕೆ ಧರ್ಮರಕ್ಷಣೆಯಾದಂತಾಗಲಿಲ್ಲ. ಆ ಹಿಂದೂ ಧರ್ಮದ ತಿರುಳು ಬಹು ಜನರಿಗೆ ತಿಳಿಯುವಂತೆ ಮಾಡಬೇಕಾಗಿದ್ದಿತು. ಲೌಕಿಕ ವಿದ್ಯೆಗಳ ಪ್ರಚಾರವನ್ನು ಮಾಡಬೇಕಾಗಿದ್ದಿತು. ವಿದ್ಯಾರಣ್ಯರು ಅದಾಗ ಕೈಕೊಂಡರೀ ಕೆಲಸ. ಅವರೂ ಅವರ ತಮ್ಮ ಸಾಯಣರೂ ಅನೇಕ ಗ್ರಂಥಗಳನ್ನು ಬರೆದರು. ವೇದಗಳಿಗೂ ಬ್ರಾಹ್ಮಣಗಳಿಗೂ ಭಾಷ್ಯಗಳನ್ನು ರಚಿಸಿದರು; ಉಪನಿಷತ್ತುಗಳಿಗೆ ಟೀಕೆಯನ್ನು ಬರೆದರು. ಅಲ್ಲದೆ ಜೀವನ್ಮುಕ್ತಿವಿವೇಕ ವೇದಾಂತ ಪಂಚದಶಿ ಮೊದಲಾದ ಗ್ರಂಥ

ಗಳನ್ನು ರಚಿಸಿ ಸರ್ಗಮವಾದ ಹಿಂದೂ ಧರ್ಮದ ತತ್ತ್ವಗಳನ್ನು ಸುಗಮವಮಾಡಿದರು. ನ್ಯಾಯ ವ್ಯಾಕರಣ ಅಲಂಕಾರ ಮೊದಲಾದ ವ್ಯಾವಹಾರಿಕ ವಿಷಯಗಳ ಮೇಲೆಯೂ ಅನೇಕ ಗ್ರಂಥಗಳು ರಚಿಸಲ್ಪಟ್ಟವು. ಇಂದು ಮಾಧವಸಾಯಣರ ಹೆಸರಿನ ಮೇಲೆ ಅನೇಕ ಗ್ರಂಥಗಳು ದೊರೆಯುತ್ತಿವೆ. ಜರ್ಮನ್ ಪಂಡಿತನಾದ ಆಫ್ರೆಟ (Aufrecht) ಎಂಬವನು ಪ್ರಸಿದ್ಧಿಸಿದ ಸಂಸ್ಕೃತ ಗ್ರಂಥಗಳ ಹೆಸರುಗಳಲ್ಲಿ ಸಾಯಣಾಚಾರ್ಯರವೆಂದು ೧೧೩ ಗ್ರಂಥಗಳು ಉಲ್ಲೇಖಿಸಲ್ಪಟ್ಟಿವೆ. ಆ ಕಾಲದಲ್ಲಿ ಮಾಧವ ಸಾಯಣರಿಬ್ಬರೇ ಅಲ್ಲ; ಅವರ ಗುರುಗಳಾದ ವಿದ್ಯಾತೀರ್ಥರೂ ಭಾರತೀತೀರ್ಥರೂ ಹಲವು ಗ್ರಂಥಗಳನ್ನು ರಚಿಸಿದರು. ವಿದ್ಯಾರಣ್ಯರು ತಾವಲ್ಲದೆ ವಿಜಯನಗರದಲ್ಲಿ ಅನೇಕ ಪಂಡಿತರಿಗೆ ಆಶ್ರಯಕೊಟ್ಟು ಹಲವು ಗ್ರಂಥಗಳನ್ನವರಿಂದ ಬರೆಸಿದರು. ವಿದ್ಯಾರಣ್ಯ ಸಾಯಣರವೆಂದು ತಿಳಿಯಲ್ಪಡುವ ಅನೇಕ ಗ್ರಂಥಗಳು ಅವರ ಸಂಪಾದಕತ್ವದಲ್ಲಿ ಬೇರೆಬೇರೆ ಪಂಡಿತರಿಂದ ಬರೆಯಲ್ಪಟ್ಟವುಗಳೆಂದು ಹಲವರ ಅಭಿಪ್ರಾಯವಿದೆ. ಇದು ನಿಜವೂ ಇರಬಹುದು. ಇಂತು ೧೪ನೆಯ ಶತಮಾನದ ಉತ್ತರಾರ್ಧದಲ್ಲಿ (೧೩೫೦--೧೪೦೦) ವಿಜಯನಗರದ ರಾಜಾಸ್ಥಾನದಲ್ಲಿ ಅನೇಕ ಸಂಸ್ಕೃತ ಧಾರ್ಮಿಕ ವ್ಯಾವಹಾರಿಕ ಗ್ರಂಥಗಳು ಹುಟ್ಟಿದುವು. ಆದರೊಂದು, ಈ ಕಾಲದಲ್ಲಿ ಹುಟ್ಟಿದ ಗ್ರಂಥಗಳಲ್ಲಿ ಕಾವ್ಯಗಳು ಕಡಿಮೆ. ಇಲ್ಲವೆಂದರೂ ಅಡ್ಡಿಯಿಲ್ಲ. ಮುಖ್ಯವಾಗಿ ಈ ಕಾಲದಲ್ಲಿ ಧರ್ಮದ ಬಗ್ಗೆ ನಿಜವಾದ ಕಲ್ಪನೆಯನ್ನು ಜನರಲ್ಲಿ ಹರಡಬೇಕಾಗಿದ್ದಿತು. ಧರ್ಮರಕ್ಷಣೆಗಾಗಿಯೇ ರಾಜಕಾರಣದಲ್ಲಿ ಬಿದ್ದು ಸಾಮ್ರಾಜ್ಯಪ್ರತಿಷ್ಠಾಪನೆ ಮಾಡಿದ, ಶ್ರೀಂಗೇರಿಪೀಠಾಧಿಷ್ಠಿತರೂ ಧರ್ಮಾಧಿಕಾರಿಗಳೂ ಆದ ವಿದ್ಯಾರಣ್ಯರ ನೇತೃತ್ವದಲ್ಲಿ ಧಾರ್ಮಿಕ

ಗ್ರಂಥಗಳು ವಿಶೇಷವಾಗಿ ಹೊರಟುದು ಸ್ವಾಭಾವಿಕವೆ! ಈ ಕಾಲದಲ್ಲಿ ಹುಟ್ಟಿದ ಕಾವ್ಯಗಳಲ್ಲಿ ಹೆಸರು ತೆಗೆದುಕೊಳ್ಳುವಂತಹದೆಂದರೆ ಬುಕ್ಕರಾಯನ ಸೊಸೆಯಾದ ಗಂಗಾದೇವಿಯು ಬರೆದ "ವೀರಕಂಪಣರಾಯ ಚರಿತಂ" ಎಂಬುದೊಂದು. ತನ್ನ ಗಂಡನಾದ ಇಮ್ಮಡಿ ಕಂಪಣ್ಣನು ತೊಂಡಮಂಡಲದ ಅರಸನಾದ ಚಂಪರಾಯನ ಮೇಲೆ ಸಾಗಿಹೋಗಿ ಅವನನ್ನು ಹಣ್ಣುಮಾಡಿ ಅಲ್ಲಿಂದ ಮಧುರೆಗೆ ಹೋಗಿ ಅಲ್ಲಿಯ ಸುಲ್ತಾನನನ್ನು ಸದೆಬಡೆದ ಸಂಗತಿಯು ವರ್ಣಿತವಾಗಿದೆಯೀ ಕಾವ್ಯದಲ್ಲಿ. ಸ್ತ್ರೀಯರೂ ರಸವತ್ತಾದ ಕಾವ್ಯಗಳನ್ನು ಬರೆಯುವಷ್ಟು ಸಂಸ್ಕೃತದ ಜ್ಞಾನ ಸಂಪಾದಿಸಿದ್ದರೆಂದ ಮೇಲೆ ಸಾಮಾನ್ಯಜನತೆಯಲ್ಲಿ ಸಂಸ್ಕೃತದ ಪ್ರಚಾರವು ಆದೆಷ್ಟು ಮಟ್ಟಿಗೆಯಿರಬೇಕೆಂಬುದು ವ್ಯಕ್ತವಾಗುವಂತಿದೆ.

ಈ ಕಾಲದಲ್ಲಿ ಕನ್ನಡದಲ್ಲಿ ಬರೆಯಲ್ಪಟ್ಟ ಗ್ರಂಥಗಳು ತೀರ ಕಡಿಮೆ. ರಚಿತವಾದ ಕನ್ನಡ ಗ್ರಂಥಗಳೆರಡರ ಹೆಸರು ಹೇಳಬಹುದು. ಮೊದಲನೆಯ ಹರಿಹರರಾಯನ ಆಳಿಕೆಯಲ್ಲಿ ಮುಗಳಿಯ ಪುರದ ಅಧಿಪನಾದ ಒಂದನೆಯ ಮಂಗರಸನು ಬರೆದ ಖಗೇಂದ್ರ ಮಣಿದರ್ಪಣವೊಂದು, ಎರಡನೆಯ ಹರಿಹರನ ಆಸ್ಥಾನ ಕವಿಯಾಗಿದ್ದ ಮಧುರನು ಬರೆದ ಧರ್ಮನಾಥ ಪುರಾಣವೊಂದು.

೧೪ನೆಯ ಶತಮಾನದ ಅಂತ್ಯದಲ್ಲಿಯೇ ವಿಜಯನಗರದ ಆಸ್ಥಾನದಲ್ಲಿ ಕಾವ್ಯಕ್ಕೆ ಅಲ್ಪಸ್ವಲ್ಪ ಗೌರವವು ಬರತೊಡಗಿದ್ದಿತು ೧೫ನೆಯ ಶತಮಾನದಲ್ಲಿ ಅದಕ್ಕೆ ವಿಶೇಷ ಸ್ಥಾನ ದೊರೆಯಿತು. ವಿಜಯನಗರದ ರಾಜರಿಂದಲೂ ಅವರ ಆಸ್ಥಾನದ ಪಂಡಿತರಿಂದಲೂ ಅನೇಕ ಕಾವ್ಯಗ್ರಂಥಗಳು ರಚಿಸಲ್ಪಟ್ಟುವು. ವೀರಕಂಪಣಚರಿತೆಯನ್ನು ಬರೆದ ಗಂಗಾದೇವಿಯ ಮಗನಾದ ದೇವರಾಜನು ಕನ್ನಡ

ದಲ್ಲಿ ಸೊಬಗಿನ ಸೋನೆ ಎಂಬ ಕಾವ್ಯವನ್ನು ಬರೆದಿದ್ದಾನೆ ಅಲ್ಲದೆ ಸಂಸ್ಕೃತದಲ್ಲಿರುವ ಅಮರುಕ ಶತಕದ ಭಾಷಾಂತರ ಮಾಡಿದ್ದಾನೆ. ೧೪೧೯-೧೪೪೬ ರ ವರೆಗೆ ರಾಜ್ಯಭಾರ ಮಾಡಿದ ಪ್ರೌಢದೇವರಾಯನ ಕಾಲದಲ್ಲಂತೂ ಕನ್ನಡದಲ್ಲಿ ಹಲವು ಗ್ರಂಥಗಳು ರಚಿತವಾದುವು. ರಾಯನು ವೀರಶೈವ ದೀಕ್ಷೆಯನ್ನು ತೆಗೆದುಕೊಂಡನು. ಅದರಿಂದ ವೀರಶೈವ ಮತಕ್ಕೆ ವಿಶೇಷ ಉತ್ತೇಜನ ದೊರೆಯಿತು. ಈತನ ಕಾಲದಲ್ಲಿ. ಮಹಾಪ್ರಧಾನನಾಗಿದ್ದ ಲಕ್ಕಣ ದಂಡೇಶನು ಶಿವತತ್ವ ಚಿಂತಾಮಣಿಯನ್ನು ಬರೆದನು. ದಂಡನಾಯಕ ಜಕ್ಕಣಾರ್ಯನು ನೂರೊಂದುಸ್ಥಲವನ್ನು ಬರೆದನು. ಚಾಮರಸನು ಪ್ರಭುಲಿಂಗ ಲೀಲೆಯನ್ನು ರಚಿಸಿ ಮೆಚ್ಚು ಪಡೆದನು. ಕನ್ನಡದಲ್ಲಿ ಪ್ರಸಿದ್ಧವಾದ ಭಾರತವು ಕುಮಾರವ್ಯಾಸನೆಂದು ಬಿರುದು ಪಡೆದ ಗದುಗಿನ ನಾರಯಣಪ್ಪನಿಂದ ಬರೆಯಲ್ಪಟ್ಟಿತು. ಚಾಮರಸನೂ ಒಂದು ಭಾರತವನ್ನು ಬರೆದಿದ್ದನಂತೆ. ಮಹಲಿಂಗದೇವನು ಏಕೋತ್ತರಶತಸ್ಥಲ, ಪ್ರಭುದೇವರಷಟ್ಸ್ಥಲಜ್ಞಾನಚಾರಿತ್ರ್ಯಾದಿವಿಚಾರ ಟೀಕೆಗಳನ್ನು, ಕಲ್ಲಮಠದ ಪ್ರಭುದೇವನು ಲಿಂಗಲೀಲಾವಿಲಾಸಚಾರಿತ್ರ, ಪ್ರಭುದೇವರ ಮಂತ್ರಗೋಪ್ಯಟೀಕೆಗಳನ್ನು, ಕರಸ್ಥಲನಾಗಿದೇವನು ಒಂದು ತ್ರಿಪದಿಯನ್ನು, ಗುರುಬಸವನು ವೀರಶೈವರಲ್ಲಿ ಸಪ್ತಕಾವ್ಯಗಳೆಂದು ಪ್ರಸಿದ್ಧಿಪಡೆದ ಶಿವಯೋಗಾಂಗಭೂಷಣ, ಸದ್ಗುರುರಹಸ್ಯ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭಗೀತೆ, ಅವಧೂತಗೀತೆ, ಮನೋವಿಜಯ ಎಂಬ ಕಾವ್ಯಗಳನ್ನು ಬರೆದರು. ಬತ್ತಲೇಶ್ವರನು ರಾಮಾಯಣವನ್ನು ಬರೆದನು. ಮಗ್ಗೆಯ ಮಾಯಿದೇವನು ಶತಕತ್ರಯವನ್ನು ರಚಿಸಿ--ಶಿವಾಧವಶತಕ, ಶಿವಾವಲ್ಲಭಶತಕ, ಐಪುರೀಶ್ವರಶತಕ--ರಾಯನಿಂದ ಮನ್ನಣೆ ಪಡೆದನು. ಈ ಪ್ರೌಢದೇವರಾಯನ ಮಹಾ

ಪ್ರಧಾನ ಗುರುರಾಯನ ಪೋಷಣೆಯಲ್ಲಿ ಅನ್ಯಭಾಷೆಯಲ್ಲಿ ಪ್ರವೀಣನಾದ ಚಂಪ್ರಕವಿಯೆಂಬವನೊಬ್ಬನಿದ್ದನು. ಅವನು ವಿರೂಪಾಕ್ಷೇಶ್ವರ ಶತಕ ಗುರುಮೂರ್ತಿಶಂಕರಶತಕಗಳನ್ನು ಬರೆದಿದ್ದಾನೆ. ಇಂತು ಈತನ ಕಾಲದಲ್ಲಿ ಕನ್ನಡದಲ್ಲಿ ವಿಶೇಷವಾಗಿ ಕಾವ್ಯಗಳು ಬರೆಯಲ್ಪಟ್ಟುವು. ಇವುಗಳಲ್ಲಿ ಹೆಚ್ಚಾದುವು ವೀರಶೈವ ಮತಕ್ಕೆ ಸಂಬಂಧಿಸಿವೆ. ಈ ರಾಯನ ಕಾಲದಲ್ಲಿ ರಚಿತವಾದ ನಾರಣಪ್ಪನ ಭಾರತ ಪ್ರಭುಲಿಂಗಲೀಲೆಗಳು ಬೇರೆ ಭಾಷೆಗಳಲ್ಲಿಯೂ ಭಾಷಾಂತರಿಸಲ್ಪಟ್ಟಿವೆ. ಪ್ರಭುಲಿಂಗಲೀಲೆಯು ತೆಲುಗು ತಾಮಿಳು ಭಾಷೆಗಳಲ್ಲಿ ಭಾಷಾಂತರಿತವಾಗಿದೆ. ನಾರಣಪ್ಪನ ಭಾರತವು ಚಂದ್ರಾತ್ಮಜನೆಂಬ ಕವಿಯಿಂದ ಮಹಾರಾಷ್ಟ್ರಭಾಷೆಗೆ ಭಾಷಾಂತರಿಸಲ್ಪಟ್ಟಿದೆ. ಈ ಪ್ರೌಢರಾಯನ ಆಸ್ಥಾನದಲ್ಲಿ ಸಂಸ್ಕೃತ ಕವಿಗಳೂ ಇದ್ದರು. ಶಾರ್ಙದೇವನ ಸಂಗೀತ ರತ್ನಾಕರಕ್ಕೆ ಟೀಕೆಯನ್ನು ಬರೆದ ಕಲ್ಲಿನಾಥನು ಈ ರಾಯನ ಆಶ್ರಯದಲ್ಲಿಯೇ ಇದ್ದನು. ರಾಯನ ಆಸ್ಥಾನದಲ್ಲಿ ಅನೇಕ ಪಂಡಿತರಿದ್ದು ಮೇಲಿಂದ ಮೇಲೆ ವಾದವಿವಾದಗಳೂ ನಡೆಯುತಿದ್ದುವು. ಇವನಾಸ್ಥಾನದಲ್ಲಿ ವಾದವಿವಾದ ಮಾಡಿ ನೇಮಿಚಂದ್ರನು ಜಯಪತ್ರವನ್ನು ಪಡೆದನೆಂಬುದು ತೆರಕಣಾಂಬಿ ಬೊಮ್ಮರಸನ ಸನತ್ಕುಮಾರ ಚರಿತೆಯಿಂದ ತಿಳಿಯುತ್ತದೆ.

ಪ್ರೌಢದೇವರಾಯನ ತರುವಾಯ ಪಟ್ಟವೇರಿದ ಮಲ್ಲಿಕಾರ್ಜುನನು ಸ್ವತಃ ಕವಿಯಾಗಿದ್ದನು. ಅವನು ಕಾಮಶಾಸ್ತ್ರದ ಮೇಲೆ ಒಂದು ಗ್ರಂಥವನ್ನು ಬರೆದಿದ್ದನೆಂಬುದು ಕಲ್ಲರಸನ ಜನವಶ್ಯವೆಂಬ ಗ್ರಂಥದಿಂದ ತಿಳಿದು ಬರುತ್ತದೆ. ಕಲ್ಲರಸನು ತನ್ನ ಜನವಶ್ಯದಲ್ಲಿ "ಧಾತ್ರೀಶ ದೇವನೃಪಪುತ್ರ ಮೂರುರಾಯರಗಂಡ ವೈರಿನೃಪಗಜಗಂಡಭೇರುಂಡನಾದ ಯದುವಂಶ ವನಧಿವಿಧು ಮಲ್ಲಿಕಾ

ರ್ಜುನನು ತನ್ನ ಹೆಂಡತಿಗೆ ಹೇಳಿದುದನ್ನು ಕನ್ನಡದಲ್ಲಿ ಬರೆದಿರುವೆ''ನೆಂದು ಹೇಳುವನು. ಇದನ್ನು ನೋಡಿದರೆ ಮಲ್ಲಿಕಾರ್ಜುನನು ಸಂಸ್ಕೃತದಲ್ಲಿಯೂ ಕಾವ್ಯಗಳನ್ನು ಬರೆದಿರುವಂತೆ ಊಹಿಸಬಹುದಾಗಿದೆ. ಮಲ್ಲಿಕಾರ್ಜುನನು ವಿದ್ಯಾವಿಶಾರದನಾಗಿದ್ದನೆಂತಲೂ ಅವನಿಗೆ ಅಸಾಧಾರಣವಾದ ಜ್ಯೋತಿಷ ಜ್ಞಾನವಿತ್ತೆಂತಲೂ ಹಲವು ಗ್ರಂಥಗಳನ್ನು ಬರೆದಿರುವನೆಂತಲೂ ನೂನೀಜನು ಬರೆದ ಚರಿತ್ರೆಯಿಂದ ತಿಳಿಯುತ್ತದೆ. ಮಹಾನಾಟಕ ಸುಧಾನಿಧಿಯನ್ನು ಈತನೇ ಬರೆದಿರುವನೆಂದು ಕೆಲವರ ಊಹೆ ಇವನಾಸ್ಥಾನದಲ್ಲಿದ್ದುಕೊಂಡು ಕಲ್ಲರಸನು ಜನವಶ್ಯವನ್ನು ಬರೆದನು. ಮಲ್ಲಿಕಾರ್ಜುನನ ತರುವಾಯ ವಿಜಯನಗರ ಸಾಮ್ರಾಜ್ಯದ ಬಗ್ಗೆ ರಾಜಮನೆತನಗಳಲ್ಲಿಯೇ ಬಡಿದಾಟ ಕೊಲೆ ಸುಲಿಗೆಗಳು ನಡೆದುವು ಇಂತಹ ಪರಿಸ್ಥಿತಿಯಲ್ಲಿ ವಾಙ್ಮಯದ ಕಡೆಗೆ ರಾಜರ ಲಕ್ಷ್ಯವೆಲ್ಲಿ? ಆದರೂ ವಿರೂಪಾಕ್ಷನು ಸಂಸ್ಕೃತದಲ್ಲಿ ಸ್ವತಃ ನಾರಾಯಣೀವಿಲಾಸ ಎಂಬ ನಾಟಕವನ್ನು ಬರೆದಿರುವನು. ಆ ಗ್ರಂಥದಲ್ಲಿ ಸಕಲ ಕಲಾವಿಲಾಸಿನಿಯು ತನ್ನನ್ನು ಆಶ್ರಯಿಸಿರುವಳಾಗಿ ಹೇಳಿಕೊಂಡಿರು ವನು. ಷಟ್ಸ್ಥಲಜ್ಞಾನಸಾರಾಮೃತವನ್ನು ಬರೆದ ತೋಂಟದ ಸಿದ್ಧಲಿಂಗನು ಈ ವಿರೂಪಾಕ್ಷನ ಆಳಿಕೆಯಲ್ಲಿಯೇ ಇದ್ದನು. ಕವಿಲಿಂಗನಪದದ ಕರ್ತೃವಾದ ಕವಿಲಿಂಗನು ವಿರೂಪಾಕ್ಷನ ರಾಜ್ಯ ವನ್ನು ಆಕ್ರಮಿಸಿದ ಸಾಳುವ ನರಸಿಂಹನ ಆಸ್ಥಾನ ಕವಿಯಾಗಿದ್ದನು. ಇಂತು ೧೫ನೆಯ ಶತಮಾನದಲ್ಲಿ ವಿಜಯನಗರದ ಆಸ್ಥಾನದಲ್ಲಿ ಕನ್ನಡ ಕವಿಗಳಿಗೆ ಆಶ್ರಯ ದೊರೆತುದರಿಂದ ಅನೇಕ ಕಾವ್ಯಗಳಾದುವು ಸಂಸ್ಕೃತದಲ್ಲಿಯೂ ಹಲವು ಕಾವ್ಯಗಳು ರಚಿಸಲ್ಪಟ್ಟುವು.

೧೬ನೆಯ ಶತಮಾನದ ಆದಿಭಾಗವು ಕೃಷ್ಣದೇವರಾಯನ ಆಳಿ ಕೆಯಕಾಲ. ಅವನಾಸ್ಥಾನವಂತೂ ವಿದ್ವಾಂಸರ ನೆಲೆಮನೆ. ಸ್ವತಃ

ಕವಿಯುವನು. ಸಂಸ್ಕೃತದಲ್ಲಿ ಜಾಂಬವತೀಕಲ್ಯಾಣ ಎಂಬ ಕಾವ್ಯ ಬರೆದಿರು ವನು. ತೆಲುಗು ನಾಡಿಗೆ ಹೋದಾಗ ಅಲ್ಲಿಯ ದೇವರು ತೆಲುಗಿನಲ್ಲಿಯೂ ಒಂದು ಕಾವ್ಯ ಬರೆ ಎಂದು ಹೇಳಿದುದರಿಂದ ಅಚ್ಚಕನ್ನಡಿಗನಾದ ಈತನು ತೆಲುಗಿನಲ್ಲಿ ಅಮುಕ್ತಮಾಲ್ಯದ ಎಂಬ ಗ್ರಂಥವನ್ನು ಬರೆದ ನೆಂಬು ಆ ಗ್ರಂಥದಲ್ಲಿಯ ಪದ್ಯಗಳಿಂದ ತಿಳಿಯುತ್ತದೆ. ಎಂದರೆ ಕನ್ನಡ ಸಂಸ್ಕೃತ, ತೆಲುಗು ಈ ಮೂರು ಭಾಷೆಗಳಲ್ಲಿಯೂ ರಾಜನು ಪ್ರವೀಣನು. ಈ ಮೂರು ಭಾಷೆಯ ಕವಿಗಳೂ ರಾಜನಾಸ್ಥಾನದಲ್ಲಿ ದ್ದರು. ರಾಜಗುರುಗಳಾದ ವ್ಯಾಸರಾಯರು ತರ್ಕತಾಂಡವ, ನ್ಯಾಯಾ ಮೃತ, ತಾತ್ಪರ್ಯಚಂದ್ರಿಕೆಗಳೆಂಬ ಮೂರು ಸಂಸ್ಕೃತ ಗ್ರಂಥಗ ಳನ್ನು ರಚಿಸಿರುವರು. ಅಲ್ಲದೆ ಕನ್ನಡದಲ್ಲಿ ಅನೇಕ ಹರಿಕೀರ್ತನೆ ಗಳನ್ನೂ ಮಾಡಿರುವರು. ನಾರಣಪ್ಪನಿಂದ ರಚಿತವಾದ ಕನ್ನಡ ಮಹಾ ಭಾರತವನ್ನು ಈ ಕೃಷ್ಣರಾಯನ ಅನುಜ್ಞೆಯಿಂದ ತಿಮ್ಮಣ್ಣಕವಿಯು ಪೂರ್ಣಮಾಡಿದನು. ತೆಲುಗು ಕವಿಗಳಂತೂ ಕೃಷ್ಣರಾಯನನ್ನು ಆಂಧ್ರ ಭೋಜನೆಂದು ಕರೆಯ ತೊಡಗಿದರು. ಮಂತ್ರಿಯಾದ ತಿಮ್ಮರಸನ ಅಳಿಯನು ತೆಲುಗನು. ಅವನ ಮಧ್ಯಸ್ಥಿಕೆಯಿಂದ ಅಲಸಾನಿ ಪೆದ್ದನ್ನಾ ನಂದಿ ತಿಮ್ಮನ್ನಾ, ಮಾದಯ್ಯಾಗಾರಿಮಲ್ಲನ್ನಾ ತೆನ್ನಾಲರಾಮಕೃಷ್ಣ ಎಂಬ ನಾಲ್ವರು ತೆಲುಗು ಕವಿಗಳು ರಾಯನ ಆಸ್ಥಾನದ ಆಶ್ರಯ ವನ್ನು ಪಡೆದಿದ್ದರು. ಇವರಲ್ಲಿ ಅಲಸಾನಿಪೆದ್ದನ್ನಾ ಎಂಬವನು ಮನು ಚರಿತ್ರೆಯನ್ನು ಬರೆದು ಕೃಷ್ಣರಾಯನಿಗರ್ಪಿಸಿ ಆಂಧ್ರಭಾಷಾಪಿತಾಮಹ ನೆಂಬ ಬಿರುದು ಪಡೆದನು. ಆಂಧ್ರಭಾಷೆಯ ಪಂಚಕಾವ್ಯಗಳಲ್ಲಿ ಇದೊಂದು. ನಂದಿ ತಿಮ್ಮನ್ನನು ಪಾರಿಜಾತಾಪಹರಣ ಎಂಬ ಮಧುರ ಕಾವ್ಯವನ್ನು ಬರೆದಿದ್ದಾನೆ. ತೆನ್ನಾಲ ರಾಮಕೃಷ್ಣನು ಪಾಂಡುರಂಗ ವಿಜಯ ಬರೆದಿದ್ದಾನೆ. ಕೃಷ್ಣರಾಯನಾಸ್ಥಾನದಲ್ಲಿ ಈತನು ಒಳ್ಳೇ

ವಿನೋದಿಯೆಂದು ಪ್ರಸಿದ್ಧನಾಗಿದ್ದನು. ಕೃಷ್ಣದೇವರಾಯನ ತರುವಾಯ ಪಟ್ಟವೇರಿದ ಅವನ ಮಲತಮ್ಮ ಅಚ್ಯುತರಾಯನಾದರೂ ಕವಿಜನಕ್ಕಾಶ್ರಯನಾಗಿದ್ದನು. ದಾಸಶ್ರೇಷ್ಠರಾದ ಪುರಂದರದಾಸರು ಈ ರಾಯನಿಂದ ಬಹುಮಾನ ಪಡೆದರು. ಚಾಟುವಿಟ್ಠಲನಾಥನೆಂಬ ಬಿರುದುಳ್ಳ ಸದಾನಂದಯೋಗಿಯು ಭಾಗವತವನ್ನು ಬರೆದನು. ಅಲ್ಲದೆ ಕೃಷ್ಣರಾಜವಿಜಯಮು ಎಂಬ ತೆಲುಗುಕಾವ್ಯದಕರ್ತೃವಾದ ಧೂರ್ಜಟಿಯೂ ಈತನಾಳಿಕೆಯಲ್ಲಿಯೆ ಇದ್ದನೆಂದು ಹೇಳುತ್ತಾರೆ. ಸದಾಶಿವರಾಯನೂ ರಾಮರಾಯನೂ ಪಂಡಿತರಿಗೂ ಕವಿಗಳಿಗೂ ಗ್ರಾಮಗಳನ್ನು ಕೊಟ್ಟು ತಮ್ಮ ಆಸ್ಥಾನದಲ್ಲಿಟ್ಟುಕೊಂಡಿದ್ದರು. ಸದಾಶಿವರಾಯನು ೧೫೪೫ರಲ್ಲಿ ತಲಪಾಕ ತಿರುಮಲಯ್ಯಗಾರು ಎಂಬವನಿಗೆ ಎರಡು ಗ್ರಾಮಗಳನ್ನು ಉಂಬಳಿ ಹಾಕಿಕೊಟ್ಟನು. ಆಚಾರಯ್ಯ ಎಂಬ ವಿದ್ವಾಂಸನಿಗೂ ಒಂದು ಗ್ರಾಮವನ್ನು ಉಂಬಳಿ ಹಾಕಿಕೊಟ್ಟುದು ಶಾಸನಗಳಿಂದ ತಿಳಿಯುತ್ತದೆ. ಸದಾಶಿವರಾಯನ ಕಾಲದಲ್ಲಿ ಕಾರುಬಾರ ಸಾಗಿಸುತಿದ್ದ ರಾಮರಾಯನಂತೂ ಸ್ವತಃ ಕವಿಯಾಗಿದ್ದನು. ಇವನ ಗುರುಗಳಾದ ತಾತಾಚಾರ್ಯರು ಪಂಚಮತಭಂಜನ ಎಂಬ ಗ್ರಂಥವನ್ನು ಬರೆದಿರುವರು. ಮಾಧ್ವಗುರು ವಿಜಯಚಂದ್ರರು ಹಲವು ಗ್ರಂಥಗಳನ್ನು ರಚಿಸಿ ರಾಮರಾಯನಿಂದ ಕನಕರತ್ನಾಭಿಷೇಕ ಮಾಡಿಸಿಕೊಂಡರು. ಅಹೋಬಲ ಮಠದ ಷಷ್ಠಪರಾಂಕುಶನು ಸಿದ್ಧಾಂತಮಣಿದೀಪಂ, ಪಂಚಕಲಾದೀಪಿಕಾ, ಪ್ರಪತ್ತಿಪ್ರಯೋಗ ಎಂಬ ಗ್ರಂಥಗಳನ್ನು ರಚಿಸಿದನು. ರಾಮರಾಯನ ಆಸ್ಥಾನದಲ್ಲಿ ಒಳ್ಳೇ ಹೆಸರು ಪಡೆದ ತೆಲುಗು ಕವಿಯೆಂದರೆ ಭಟ್ಟುಮೂರ್ತಿಯು. “ರಾಮರಾಜಭೂಷಣ” ಎಂಬ ಬಿರುದಿದ್ದಿತವಗೆ.

ರಕ್ಕಸತಂಗಡಿಗಿಯ ಕಾಳಗದಿಂದ ವಿಜಯನಗರವು ಹಾಳಾಗಲು ರಾಮರಾಯನ ತಮ್ಮ ತಿರುಮಲರಾಯನು ಪೆನುಗೊಂಡೆಗೆ ಹೋಗಿ

ಸದಾಶಿವರಾಯನ ಹೆಸರಿನಿಂದ ಕಾರುಬಾರ ಸಾಗಿಸತೊಡಗಿದ ಸಂಗತಿ ಗೊತ್ತೇ ಇದೆ. ಈ ತಿರುಮಲರಾಯನ ಕಾಲದಲ್ಲಿಯೂ ಭಟ್ಟುಮೂರ್ತಿಯು ಆಸ್ಥಾನಕವಿಯಾಗಿದ್ದನು. ‘ನರಸಭೂಪಾಲೀಯಮು’ ‘ವಸುಚರಿತ್ರಮು’ ಎಂಬೆರಡು ಗ್ರಂಥಗಳು ಈ ಭಟ್ಟುಮೂರ್ತಿಯಿಂದ ರಚಿತವಾದುವು ವಸುಚರಿತ್ರವು ತಿರುಮಲರಾಯನಿಗೆ ಅರ್ಪಿತವಾಗಿದೆ. ‘ನರಸಭೂಪಾಲೀಯಮು’ ಎಂಬುದು ರಾಮರಾಯನ ಅಳಿಯನಾದ ನರಸರಾಯನಿಗೆ ಅರ್ಪಿತವಾಗಿದೆ. ಪ್ರತಾಪರುದ್ರೀಯ ಎಂಬ ಸಂಸ್ಕೃತ ಅಲಂಕಾರ ಗ್ರಂಥದ ಭಾಷಾಂತರವಿದು. ವೆಂಕಟನ ಆಳಿಕೆಯಲ್ಲಿ ಇದೇ ಭಟ್ಟುಮೂರ್ತಿಯು ಹರಿಶ್ಚಂದ್ರನಲೋಪಾಖ್ಯಾನಗಳನ್ನು ಬರೆದನು. ಪೆನುಗೊಂಡೆಯೂ ಚಂದ್ರಗಿರಿಯೂ ತೆಲುಗು ಪ್ರದೇಶ. ಅದರಿಂದ ಆರವೀಡು ವಂಶದ ರಾಮರಾಯನು ಅಚ್ಚಗನ್ನಡಿಗನಾದರೂ ಪೆನುಗೊಂಡೆ ಚಂದ್ರಗಿರಿಗಳಲ್ಲಿ ಆಳಿದ ಅವನ ವಂಶದ ರಾಯರು ಸ್ವಾಭಾವಿಕವಾಗಿಯೇ ತೆಲುಗರಾಗಿ ಹೋದರು. ಅದರಿಂದ ಅವರ ಆಸ್ಥಾನದಲ್ಲಿ ತೆಲುಗು ಸಂಸ್ಕೃತ ಪಂಡಿತರಿಗೆ ವಿಶೇಷ ಆಶ್ರಯ ದೊರೆಯಿತು. ತೆಲುಗು ಕವಿಗಳು ಈ ರಾಯರೆಲ್ಲರನ್ನು ಆಂಧ್ರಭೋಜ ಎಂದು ಕರೆಯುವರು. ಇದರಿಂದಲೇ ಇವರ ಆಸ್ಥಾನದಲ್ಲಿ ಪಂಡಿತರಿಗೆ ಅದೆಷ್ಟುಮಟ್ಟಿಗೆ ಆಶ್ರಯವುದೊರೆಯುತ್ತಿತ್ತೆಂಬುದು ತಿಳಿದುಬರುವಂತಿದೆ. ತಿರುಮಲರಾಯನ ಹೆಸರಿನ ಮೇಲೆ ಶ್ರುತಿರಂಜಿನಿ ಎಂಬ ಗ್ರಂಥವೊಂದು ದೊರೆಯುತ್ತಿದೆ. ಅದು ಲಕ್ಷ್ಮಣಸೂರಿಯಿಂದ ಬರೆಯಲ್ಪಟ್ಟು ತಿರುಮಲನಿಗೆ ಅರ್ಪಿತವಾದುದೆಂದು ಕೆಲವರ ಅಭಿಪ್ರಾಯ. ಲಕ್ಷ್ಮಣಸೂರಿಯು ಅನರ್ಘರಾಘವ ಎಂಬ ಕಾವ್ಯವನ್ನೂ ಷಡ್ಭಾಷಾಚಂದ್ರಿಕಾ ಎಂಬ ಪ್ರಾಕೃತ ವ್ಯಾಕರಣವನ್ನೂ ಬರೆದನು.

ಶ್ರೀರಂಗನ ಕಾಲದಲ್ಲಿ ರಾಯಸಂ ವೆಂಕಟಪತಿಯು ಮಂತ್ರಿಯೂ

ಆಸ್ಥಾನಕವಿಯೂ ಆಗಿದ್ದನು ಅವನು ಲಕ್ಷ್ಮೀವಿಲಾಸಂ ಎಂಬ ತೆಲುಗು ಕಾವ್ಯವನ್ನು ಬರೆದಿರುವನು. ಮತ್ತೊಬ್ಬ ಮಂತ್ರಿಯಾದ ರಾಯಸ ಅಹೋಬಲ ಎಂಬವನು ಕುವಲಯವಿಲಾಸ ಎಂಬ ಸಂಸ್ಕೃತ ಕಾವ್ಯವನ್ನು ಬರೆದಿರುವನು. ಈ ಶ್ರೀರಂಗರಾಯನ ಹೇಳಿಕೆಯ ಮೇರೆಗೆ ಕರ್ಣಾಟಕಶಬ್ದಾನುಶಾಸನದ ಕರ್ತೃ ಭಟ್ಟಾಕಳಂಕನ ಗುರುವಾದ ಭಟ್ಟಾಕಳಂಕನು 'ಸಾರತ್ರಯ' ವನ್ನೂ 'ಅಲಂಕಾರ ತ್ರಯವನ್ನೂ ಬರೆದು ಆಸ್ಥಾನದಲ್ಲಿ ಓದಿ ಕೀರ್ತಿವಡೆದನು. ಅರವೀಡು ವಂಶದಲ್ಲಿ ಸಾಹಿತ್ಯದ ವಿಶೇಷ ಅಭಿಮಾನಿಯೆಂದರೆ ವೆಂಕಟಪತಿರಾಯನು. (೧೫೮೬--೧೬೧೬) ಒಳ್ಳೇ ಪಂಡಿತನೆಂದು ಖ್ಯಾತಿ ಪಡೆದಿದ್ದನೀತ. ಇವನ ಆಸ್ಥಾನದಲ್ಲಿ ಕವಿಜನರೂ ವಿದ್ವಾಂಸರೂ ಬಂದು ಚರ್ಚೆಗಾಗಿ ಸಮಯ ಕಾಯ್ದು ಕುಳಿತುಕೊಳ್ಳುತ್ತಿದ್ದರು. ಇವನ ಆಸ್ಥಾನದಲ್ಲಿದ್ದ ಆನಂದನಾಮಸಿವಯ್ಯಪಂಡರಂ ಎಂಬವನು ಪರಮರಹಸ್ಯ ಮಾಲೈ, ಚಿದಂಬರವೆಂಬ, ಅನ್ನಮಾಲೈವೆಂಬ ಎಂಬ ಗ್ರಂಥಗಳನ್ನು ಬರೆದಿರುವನು. ತಾತಾಚಾರ್ಯನೆಂಬ ತತ್ವಜ್ಞಾನಿಯು ಸಾತ್ವಿಕಬ್ರಹ್ಮವಿಲಾಸ ಪಾಂಡುರಂಗಮಹಾತ್ಮ್ಯಗಳನ್ನು ರಚಿಸಿದನು. ವೆಂಕಟಮಠಆನಂತನೆಂಬವನು ಕಾಕುಸ್ಥವಿಜಯಮ್ ಎಂಬ ತೆಲುಗು ಕಾವ್ಯವನ್ನು ರಚಿಸಿದನು. ತಿಯಾಲುಭಾಸಿರ ಎಂಬವನು ಹಳಗನ್ನಡದಲ್ಲಿರುವ ರಟ್ಟಮತವನ್ನು ತೆಲುಗಿಗೆ ಭಾಷಾಂತರಿಸಿದನು. ಮಾಧವಾರ್ಯನು ತ್ರಿಪದದ್ಯೋತಿನಿ ಎಂಬ ಸಂಸ್ಕೃತ ವ್ಯಾಕರಣವನ್ನು, ಭಟ್ಟಾಕಳಂಕನು ಕರ್ಣಾಟಕ ಶಬ್ದಾನುಶಾಸನವೆಂಬ ಗ್ರಂಥವನ್ನು ಬರೆದರು. ಇಂತು ವಿಜಯನಗರದ ರಾಯರ ಕಾಲದಲ್ಲಿ ಸಾಹಿತಿಗಳಿಗೆ ಒಳ್ಳೇ ರಾಜಾಶ್ರಯ ದೊರೆಯಿತು. ಅವರು ಸಾಹಿತ್ಯದೇವಿಯನ್ನು ಬಗೆಬಗೆಯ ಆಭರಣಗಳಿಂದಲಂಕರಿಸಿದರು.

ನಾವಿಲ್ಲಿ ಹೇಳಹೊರಟುದು ಆ ಕಾಲದಲ್ಲಿ ಆ ಸಾಮ್ರಾಜ್ಯಕ್ಕೆ ಒಳಪಟ್ಟ ಸೀಮೆಯಲ್ಲೆಲ್ಲ ಸಾಹಿತ್ಯವು ಹೇಗೆ ವಿಕಾಸ ಹೊಂದಿತು? ಯಾವ ಗ್ರಂಥಗಳು ಉತ್ಪನ್ನವಾದುವು ಎಂಬುದನ್ನಲ್ಲ; ರಾಯನ ಆಸ್ಥಾನವನ್ನಾಶ್ರಯಿಸಿ ಅದೆಷ್ಟು ಜನ ಕವಿಗಳಿದ್ದರು ಅವರು ಆವ ಆವ ಗ್ರಂಥಗಳನ್ನು ಬರೆದರು ಎಂಬುದನ್ನು ಮಾತ್ರ. ಅಷ್ಟನ್ನು ಇಲ್ಲಿ ಹೇಳಿರುವೆವು. ಈ ಮೇಲಿನ ಕವಿಜನರನ್ನೂ ಗ್ರಂಥಗಳನ್ನೂ ನೋಡಿದರೆ ನಾವಿಷ್ಟು ಹೇಳಬಹುದು---ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಿಂದ ವಿದ್ಯಾರಣ್ಯರಿರುವವರೆಗೆ ರಾಜಾಸ್ಥಾನದಲ್ಲಿ ಸಂಸ್ಕೃತ ಭಾಷೆಗೆಯೇ ಪ್ರಾಮುಖ್ಯವಿದ್ದಿತು. ಪ್ರೌಢರಾಯನ ಕಾಲದಿಂದ ರಕ್ಕಸ ತಂಗಡಿಗಿಯ ಕಾಳಗವಾಗುವವರೆಗೆ ಸಂಸ್ಕೃತಕ್ಕೆ ಮನ್ನಣೆದೊರೆಯುತಿದ್ದರೂ ಕನ್ನಡಕ್ಕೆ ಅದೊಂದು ವಿಶೇಷ ಸ್ಥಾನವಿದ್ದಿತು. ಪೆನುಗೊಂಡೆ ಚಂದ್ರಗಿರಿಗಳಲ್ಲಾಳಿದ ರಾಯರ ಕಾಲದಲ್ಲಿ ಆ ಸ್ಥಾನವು ತೆಲುಗಿಗೆ ದೊರೆಯಿತು. ರಚಿತವಾದ ಗ್ರಂಥಗಳ ವಿಷಯವನ್ನು ನೋಡಿದರೆ ಅವು ಆವ ಭಾಷೆಯಲ್ಲಿ ಬರೆದಂತಹುಗಳೇ ಇರಲಿ ಧಾರ್ಮಿಕ ಗ್ರಂಥಗಳೇ ವಿಶೇಷವಾಗಿವೆ. ೧೩೩೬-೧೪೦೦ ರ ವರೆಗೆ ರಚಿತವಾದ ಗ್ರಂಥಗಳು ಆರ್ಯಧರ್ಮದ ತತ್ವಗಳನ್ನು ಕುರಿತಾದುವು. ಪ್ರೌಢರಾಯನ ಕಾಲದಿಂದ ವಿರೂಪಾಕ್ಷನ ಕಾಲದ ವರೆಗೆ ಲಿಂಗವಂತ ಮತಗ್ರಂಥಗಳು ವಿಶೇಷ. ಈ ಗ್ರಂಥಗಳು ರಗಳೆ ಷಟ್ಪದಿ ತ್ರಿಪದಿ ಮೊದಲಾದ ಹೊಸ ಅಚ್ಚಗನ್ನಡ ಮಾತ್ರಾ ವೃತ್ತಗಳಲ್ಲಿ ರಚಿತವಾಗಿವೆ. ಅನೇಕ ವಚನ ಗ್ರಂಥಗಳೂ ಇರುತ್ತವೆ ಎಂದರೆ ಕನ್ನಡವು ಈ ಕಾಲದಲ್ಲಿ ಹೊಸ ಹಾದಿಯನ್ನು ತುಳಿದು ಒಳ್ಳೇಭರದಿಂದ ಬೆಳೆಯಿತು. ಆರವೀಡು ವಂಶದ ರಾಯರ ಕಾಲದಲ್ಲಿ ಸಾಹಿತ್ಯಕ್ಕೆ ಸಂಬಂಧಿಸಿದ ಅಲಂಕಾರ ವ್ಯಾಕರಣ ಗ್ರಂಥಗಳು ರಚಿತವಾಗಿವೆ.

## ೧೫ ವಿಜಯನಗರದ ವೈಭವ.

ಯಾವುದೊಂದು ಸಾಮ್ರಾಜ್ಯವು ಅದೆಷ್ಟು ವೈಭವಶಾಲಿಯಿರುವುದೆಂಬುದನ್ನು ತಿಳಿದುಕೊಳ್ಳಬೇಕಾದರೆ ಆ ಸಾಮ್ರಾಜ್ಯದ ರಾಜಧಾನಿಯನ್ನು ನೋಡಬೇಕು. ವಿಜಯನಗರದ ವೈಭವದ ಮೇಲಿಂದ ಆ ಸಾಮ್ರಾಜ್ಯದ ವೈಭವವನ್ನೂಹಿಸಬಹುದು. ವಿಜಯನಗರವು ಇಂದು ಹಾಳು ಕೊಂಪೆ. ಆದರೆ ಸಾಮ್ರಾಜ್ಯದ ರಾಜಧಾನಿಯಾಗಿ ಮೆರೆದಂದು ಅದಕ್ಕೆ ಸರಿಯಾಗಿ ನಿಲ್ಲುವ ಪಟ್ಟಣವು ಜಗತ್ತಿನಲ್ಲಿ ಇನ್ನೊಂದಿರಲಿಲ್ಲ. ದೇವರಾಯನ ಕಾಲದಲ್ಲಿ (೧೪೪೩) ಆ ಪಟ್ಟಣವನ್ನು ಸಂದರ್ಶಿಸಿದ ಇರಾಣದ ರಾಯಭಾರಿಯಾದ ಅಬ್ದುಲ್ಲರಝಾಕನು "ಇಂತಹ ಬೇರೊಂದು ಪಟ್ಟಣವನ್ನು ಕಣ್ಣು ಎಂದೂ ನೋಡಿಲ್ಲ; ಭೂಮಿಯಮೇಲೆ ಮತ್ತೊಂದಿರುವುದಾಗಿ ಕಿವಿಯು ಕೇಳಿಲ್ಲ" ಎಂದು ಎಂದಿರುವನು. ಆಗಿನ ಕಾಲಕ್ಕಷ್ಟೆ ಅಲ್ಲ, ಈಗಿನ ಸುಧಾರಣೆಯ ಯುಗದಲ್ಲಿಯೂ ಆ ಪಟ್ಟಣವನ್ನು ಸರಿಗಟ್ಟುವಂತಹವು ಒಂದೊ ಆರ್ಧವೊ! ಆ ಪಟ್ಟಣದ ವಿಸ್ತಾರವೆಂದರೆ ೧೪ ಮೈಲು ಉದ್ದ ೧೦ ಮೈಲು ಅಗಲು. ೬೦ ಲಕ್ಷಕ್ಕೆ ಮಿಕ್ಕಿದ್ದಿತು ಜನಸಂಖ್ಯೆ. ಹಿಂದೆ ಒಂದೊಂದು ಕಾಲದಲ್ಲಿ ಜಗತ್ತಿನಲ್ಲಿ ಪ್ರಸಿದ್ಧಿವಡೆದ ಇಂದು ಪ್ರಸಿದ್ಧಿವಡೆದಿರುವ ಪಟ್ಟಣಗಳಲ್ಲಿ ಲಂಡನವೊಂದು ಬಿಟ್ಟರೆ ಜನಸಂಖ್ಯೆಯಲ್ಲಿಯೂ ವಿಸ್ತಾರದಲ್ಲಿಯೂ ಇದನ್ನು ಸರಿಗಟ್ಟುವ ಪಟ್ಟಣವು ಮತ್ತೊಂದಿಲ್ಲ. ಜಗತ್ತಿನಲ್ಲೆಲ್ಲಾ ಖ್ಯಾತಿಪಡೆದಾಗ ಆಥೆನ್ಸಿನಲ್ಲಿ ಗುಲಾಮರೂ ಸೇವಕರೂ ನಾಗರಿಕರೂ ಕೂಡಿ ಇದ್ದುದು ೫ ಲಕ್ಷ ಜನ ಮಾತ್ರ. ರೋಮಪಟ್ಟಣದಲ್ಲಿ ೧೦ ಲಕ್ಷ, ಕಾರ್ಥೇಜಿನಲ್ಲಿ ೭ ಲಕ್ಷ, ಥೇಬ್ಸದಲ್ಲಿ ೧೦ ಲಕ್ಷ, ಬಾಬಿಲೋನಿನಲ್ಲಿ ೧೫ ಲಕ್ಷ, ನಿನವೇ ಪಟ್ಟಣ

ದಲ್ಲಿ ೨೦ ಲಕ್ಷ, ದಿಲ್ಲಿಯಲ್ಲಿ ೨೦ ಲಕ್ಷ, ಪಾಟಲೀಪುತ್ರವಲ್ಲಿ ೧೫ ಲಕ್ಷ, ಅನುರಾಧಾಪುರದಲ್ಲಿ ೨೦ ಲಕ್ಷ, ಶಾಂಗಟೂನಗರವಲ್ಲಿ ೧೦ ಲಕ್ಷ, ಉಜ್ಜಯನಿಯಲ್ಲಿ ೨೦—೨೫ ಲಕ್ಷ ಜನಸಂಖ್ಯೆಯಿದ್ದಿತೆಂದು ಇತಿಹಾಸವು ಹೇಳುತ್ತಿದೆ. ಈ ಅರ್ವಾಚೀನ ಕಾಲದಲ್ಲಿ ರಾಜಧಾನಿಗಳಾಗಿ ಮೆರೆಯುವ ಪ್ಯಾರೀಸ ಪಟ್ಟಣವಲ್ಲಿ ೨೫ ಲಕ್ಷ. ನ್ಯೂಯಾರ್ಕಿನಲ್ಲಿ ೫೫ ಲಕ್ಷ, ಬರ್ಲಿನ್ ಪಟ್ಟಣವಲ್ಲಿ ೨೦ ಲಕ್ಷ, ಕಾಂಟೋನ ಪಟ್ಟಣದಲ್ಲಿ ೨೫ ಲಕ್ಷ, ಪೇಕಿಂಗಿನಲ್ಲಿ ೧೫ ಲಕ್ಷ, ಟೋಕಿಯೋದಲ್ಲಿ ೧೫ ಲಕ್ಷ, ಚಿಕಾಗೋವಿನಲ್ಲಿ ೨೦ ಲಕ್ಷ, ವಿಯೆನ್ನಾದಲ್ಲಿ ೨೦ ಲಕ್ಷ, ಸೆಂಟಪೀಟರ್ಸಬರ್ಗಿನಲ್ಲಿ ೧೨ ಲಕ್ಷ, ಕಾನ್ಸಟಾಂಟಿನೋಪಲಿನಲ್ಲಿ ೧೦ ಲಕ್ಷ, ಮುಂಬಯಿ ಕಲಕತ್ತೆಗಳಲ್ಲಿ ೧೦ ಲಕ್ಷ ಜನಸಂಖ್ಯೆಯಿರುತ್ತದೆ. ಇದರ ಮೇಲಿಂದ ಆ ವಿಜಯನಗರದ ವೈಭವವು ಎಂತಹದೆಂಬುದನ್ನು ತಿಳಿದುಕೊಳ್ಳಬಹುದು.

ಆ ಪಟ್ಟಣವನ್ನು ಕಣ್ಣಾರೆ ಮನವಾರೆ ನೋಡಿದ ಪೋರ್ಚುಗೀಜ ಪ್ರವಾಸಿಗಳು ಬಗೆಬಗೆಯಿಂದ ವರ್ಣಿಸಿರುವರು. ಅವರ ವರ್ಣನೆಯಿಂದಲೂ ಆ ಪಟ್ಟಣದ ವೈಭವವನ್ನು ಊಹಿಸಬಹುದು. ಸಾಮ್ರಾಜ್ಯದ ಒಳ್ಳೇ ವೈಭವದ ಕಾಲದಲ್ಲಿ, ಕೃಷ್ಣದೇವರಾಯನ ಆಳಿಕೆಯಲ್ಲಿ (೧೫೨೦) ವಿಜಯನಗರವನ್ನು ನೋಡಿದ ಪೀಜನು ಆ ಪಟ್ಟಣವನ್ನು ವರ್ಣಿಸಿದುದಿಂತು—"ಈ ಪಟ್ಟಣದ ಆಕಾರವು ಹೀಗೆಯೇ ಇದೆ ಎಂದೂ ಆದಿಷ್ಟೇ ವಿಸ್ತಾರವಿದೆಯೆಂದೂ ನಿಶ್ಚಿತವಾಗಿ ಹೇಳುವುದಕ್ಕಾಗುವುದಿಲ್ಲ. ಯಾವುದೊಂದು ಎತ್ತರ ಸ್ಥಳದಲ್ಲಿ ನಿಂತು ನೋಡಿದಾಗ ಪಟ್ಟಣವು ಪೂರ್ಣವಾಗಿ ಕಣ್ಣಿಗೆ ಬಿದ್ದರಲ್ಲವೆ ಹೇಳುವುದು! ನಾನೊಂದು ಎತ್ತರ ದಿನ್ನೆಯ ಮೇಲೆ ನಿಂತುನೋಡಿದೆ. ಪಟ್ಟಣದ ಬಹುಭಾಗವು ಕಂಡಿತು. ಕಂಡಷ್ಟು ಭಾಗವು ಪ್ರೇಕ್ಷಣೀಯ

ವಾಗಿದ್ದಿತು. ಅದಷ್ಟೇ ಪಟ್ಟಣವು ರೋಮನಗರದಷ್ಟು ಸಹಜ . ಇರ
ಬಹುದು. ಅಲ್ಲಲ್ಲಿ ತೋಟಪಟ್ಟಿಗಳೂ ಮಾವಿನಬನಗಳೂ ಕಂಗೊ
ಳಿಸುತ್ತಿದ್ದುವು. ನಡುನಡುವೆ ಚಿಕ್ಕದೊಡ್ಡ ಕಾಲುವೆಗಳಲ್ಲಿ ನೀರು
ಹರಿಯುತಲಿತ್ತು. ಅಲ್ಲದೆ ಅಲ್ಲಲ್ಲಿ ಕಾಣುವಕೆರೆಕಟ್ಟೆಗಳು ಪುಷ್ಕ
ರಣಿಗಳು ರಮಣೀಯವಾಗಿದ್ದುವು. ಅರಮನೆಯ ಹತ್ತಿರ
ಕಾಣುವ ತಾಳೆಯಬನವೂ ಕೈತೋಟವೂ ಮನೋಹರವಾಗಿದ್ದುವು.
ಅದರಲ್ಲಿಯ ಗಿಡಬಳ್ಳಿಗಳು ಹೂಕಾಯಿಗಳಿಂದ ಮೆರುಗುವಡೆದಿದ್ದುವು.
ಮುಸಲ್ಮಾನರ ವಸತಿಗೆ ಹೊಂದಿ ಒಂದು ಚಿಕ್ಕ ಪ್ರವಾಹವು ಹರಿ
ಯುತ್ತಿದ್ದಿತು. ಆ ಕಡೆಗೂ ಹಣ್ಣಿನಗಿಡಗಳು ದಟ್ಟವಾಗಿ ಬೆಳೆದಿದ್ದುವು.
ಅದರಿಂದ ಅದೊಂದು ವನದಂತೆಯೇ ಕಾಣುತ್ತಿತ್ತು. ಪಟ್ಟಣದಲ್ಲಿ
ಎಲ್ಲಿನೋಡಿದಲ್ಲಿ ನೀರಿನ ವಿಪುಲತೆ. ಆ ನೀರು ಪಟ್ಟಣದ ಹೊರ
ಬದಿಯಲ್ಲಿರುವ ಕೆರೆಗಳಿಂದ ತರಲ್ಪಟ್ಟದೆ.”

“ಈ ಪಟ್ಟಣದ ಜನಸಂಖ್ಯೆಯು ಅಗಣಿತವಾಗಿದೆ. ಆ ಸಂಖ್ಯೆ
ಯನ್ನು ನಾನು ಹೇಳಿದರೆ ನಿಜವೆಂದು ಸಹ ಎಣಿಸಲಿಕ್ಕಿಲ್ಲ. ಅದ
ಕ್ಕಾಗಿ ಹೇಳದಿರುವುದೇ ಮೇಲು. ಆದರೆ ಇಷ್ಟೊಂದು ಹೇಳಬಲ್ಲೆ,
ಅಲ್ಲಿಯ ಓಣಿಬೀದಿಗಳಲ್ಲಿರುವ ಜನದಟ್ಟಣೆಯಲ್ಲಿ ಮಾರ್ಗ
ಮಾಡಿಕೊಂಡು ಹೋಗಲು ಎಂತಹ ದೊಡ್ಡ ದಂಡಿಗಾದರೂ
ಶಕ್ಯವಿಲ್ಲ.”

“ವಸ್ತುಒಡವೆಗಳಿಂದಲೂ ಧನಧಾನ್ಯಗಳಿಂದಲೂ ತುಂಬಿದ
ಇಂತಹ ದೊಡ್ಡ ಪಟ್ಟಣವು ಜಗತ್ತಿನಲ್ಲಿ ಇನ್ನೆಲ್ಲಿಯೂ ಇರುವು
ದಿಲ್ಲ. ಅಕ್ಕಿ ಬೇಳೆ ಗೋದಿ ಮೊದಲಾದುವುಗಳ ವಿಪುಲಸಂಗ್ರಹವಿದೆ
ಯಲ್ಲಿ. ಇಲ್ಲಿಯ ಪೇಟೆಯ ಬೀದಿಗಳು ಗೋಣಿಗಳನ್ನು ಹೇರಿದ
ಅಸಂಖ್ಯ ಎತ್ತುಗಳಿಂದ ಕಿಕ್ಕಿರಿದಿರುತ್ತವೆ. ಅವುಗಳ ನಡುವೆ ಹಾಯಲು

ಹಾದಿ ದೊರೆಯುವುದು ದುಸ್ತರ. ಅನೇಕ ಸಲ ಅವೆಲ್ಲವು ಒಂದು ಬೀದಿಯಿಂದ ಪಾರಾಗಿ ಹೋಗುವವರೆಗೆ ಕಾದಿರಬೇಕಾಗುತ್ತದೆ, ಇಲ್ಲವೆ ಬೇರೊಂದು ಹಾದಿಯಿಂದ ಹೋಗಬೇಕಾಗುತ್ತದೆ. ನಾನು ವರ್ಣನ ಮಾಡಿದ ಮಾತುಗಳ ಪ್ರತ್ಯಂತರವನ್ನು ಬೇಕಾದವರು ಬೇಕಾದಾಗ ಬಂದು ಮಾಡಿಕೊಳ್ಳಲಿ!''

ವಿಜಯನಗರದ ಅರಸರಲ್ಲಿರುವ ಸಂಪತ್ತಿಯ ವಿಷಯದಲ್ಲಿ ಇದೇ ಪೀಜನು ಬರೆದುದೇನೆಂದರೆ--''ಪ್ರತಿವರುಷ ನಿಯಮಿತ ಹಣವನ್ನು ಹೊಸದಾಗಿ ಭಂಡಾರದಲ್ಲಿಡಬೇಕೆಂಬುದು ಈ ಅರಸುಮನೆತನದ ಪರಂಪರಾಗತ ಪದ್ಧತಿ. ಒಬ್ಬೊಬ್ಬ ಅರಸನ ಕಾಲದಲ್ಲಿಯ ಹಣವು ಬೇರೆಬೇರೆ ಕಡೆಯಲ್ಲಿ ಬೀಗಮುದ್ರೆಮಾಡಿ ಇಡಲ್ಪಟ್ಟಿರುತ್ತದೆ. ಹಿಂದಿನ ಅರಸರಿಂದ ಸಂಪಾದಿತವಾದ ಹಣವು ಎಲ್ಲಿದೆ; ಹೇಗಿಡಲ್ಪಟ್ಟಿದೆ ಎಂಬುದನ್ನು ಮುಂದಿನವರು ವಿಚಾರಿಸುವುದಿಲ್ಲ. ಅದನ್ನೊಡೆದು ನೋಡುವುದಿಲ್ಲ. ರಾಜನ ಮೇಲೆಯೂ ರಾಜ್ಯದ ಮೇಲೆಯೂ ಅಂತಹ ದೊಡ್ಡ ವಿಪತ್ತು ಬಂದಾಗಲೆ ಈ ಭಂಡಾರಗಳಿಂದ ಹಣತೆಗೆಯುವುದು. ಇದರಿಂದ ಆಪತ್ಕಾಲದಲ್ಲಿ ಉಪಯೋಗವಾಗುವಷ್ಟು ಧನದ ಸಂಚಯವು ಯಾವಾಗಲೂ ಇದ್ದೇ ಇರುತ್ತದೆ. ಈ ರಾಯನು (ಕೃಷ್ಣದೇವರಾಯ) ತನ್ನ ಭಂಡಾರವನ್ನು ಬೇರೆ ಮಾಡಿರುವನು. ಪ್ರತಿವರ್ಷವೂ ೧ ಕೋಟಿ ಹೊನ್ನುಗಳು ಹೊಸದಾಗಿ ಶೇಖರಿಸಲ್ಪಡುತ್ತವೆ. ಯಿಾಭಂಡಾರದಲ್ಲಿ. ಇದರಿಂದ ರಾಜನ ಸ್ಥಿತಿಯು ಅದೆಷ್ಟು ಸಂಪನ್ನವಾಗಿರುವುದೆಂಬುದರ ಕಲ್ಪನೆಯು ಸಹಜವಾಗಬಹುದು.''

ಪೀಜನು ಬರೆದ ಅರಮನೆಯ ವರ್ಣನೆಯನ್ನೂ ನವರಾತ್ರಿಯ ಉತ್ಸವದ ವರ್ಣನೆಯನ್ನೂ ಇಲ್ಲಿ ಕೊಡುವೆವು. ಅವುಗಳಿಂದ ಆ ನಗರದ, ಸಾಮ್ರಾಜ್ಯದ ವೈಭವವೆಷ್ಟಿದ್ದಿತೆಂಬುದನ್ನು! ವಾಚಕರೇ



( ಹೇಮಕೂಟ ಪರ್ವತದ ಮೇಲಿನ ಗುಡಿಗಳು ಹಾಗೂ ಶ್ರೀವಿರೂಪಾಕ್ಷ ದೇವಾಲಯ. )

**ವಿಜಯನಗರದ ಒಂದು ನೋಟ.**

ಊಹಿಸಿಕೊಳ್ಳಲಿ.

" ನಮ್ಮಂತೆಯೆ ಈ ಮೂರ್ತಿಪೂಜಕ ಜನರಲ್ಲಿ ಕೆಲವು ಗೊತ್ತು ಮಾಡಿದ ದಿವಸಗಳಲ್ಲಿ ಮಹೋತ್ಸವಗಳಾಗುತ್ತಿವೆ. ಅವುಗಳಲ್ಲಿ ನವರಾತ್ರಿಯ ಉತ್ಸವವೊಂದು. ಇದು ಸಪ್ಟಂಬರ ತಿಂಗಳ ೧೨ನೆಯ ತಾರೀಖಿಗೆ ಪ್ರಾರಂಭವಾಗಿ ಒಂಬತ್ತು ದಿವಸ ನಡೆಯಿತು. ಉತ್ಸವ ವೆಲ್ಲವೂ ಅರಮನೆಯಲ್ಲಿಯೇ ನಡೆಯಿತು.

"ವಿಜಯಗೃಹದಲ್ಲಿ ಒಂದು ಅರಿವೆಯ ಮಂಟಪವನ್ನು ಸಿದ್ಧ ಪಡಿಸಿರುವರು. ಅದರ ಬಾಗಿಲು ಮುಚ್ಚಲ್ಪಟ್ಟಿರುತ್ತದೆ. ಆ ಮಂಟ ಪದ ನಡುವೆ ಒಂದು ಕೋಣೆಯಲ್ಲಿ ಉತ್ಸವ ಮೂರ್ತಿಯನ್ನು ಇಟ್ಟಿರುವರು. ಮಧ್ಯದಲ್ಲಿ ಮೆಟ್ಟಿಲು ಮಾರ್ಗದ ಎದುರಿನಲ್ಲಿ ಒಂದು ಜಗುಲಿ. ಅಲ್ಲಿ ಸಿಂಹಾಸನವೊಂದಿಟ್ಟಿರುವರು. ಅದು ಕಟ್ಟಿಗೆಯದು. ಬಂಗಾರದ ಸಿಂಹಗಳ ಮೇಲಿದೆ. ಅದರ ಕಟ್ಟಿಗೆಯ ಕೆಲಸವೆಲ್ಲ ರೇಶಿ ಮೆಯ ಅರಿವೆಯಿಂದ ಆಚ್ಛಾದಿತವಾಗಿರುವುದು. ಆ ರೇಶಿಮೆಯ ಹೊದಿಕೆಯ ನಡುವಿನ ಪ್ರದೇಶದಲ್ಲಿ ಮಾಣಿಕ ಮುತ್ತು ರತ್ನಗಳನ್ನು ಕೆಚ್ಚಿದ ಬಂಗಾರದ ತಗಡುಗಳಿವೆ. ಕೆಳಗೆ ಮುತ್ತಿನ ಜಾಲರಿಗಳು. ಆ ಮಂಟಪದ ಸುತ್ತಲೂ ಬಂಗಾರದ ಮೂರ್ತಿಗಳು. ಅವೂ ಬೆಲೆಯುಳ್ಳ ಹರಳುಗಳಿಂದ ಕೆಚ್ಚಲ್ಪಟ್ಟಿವೆ. ಈ ಸಿಂಹಾಸನದಲ್ಲಿ ಬಂಗಾರದ ಮೂರ್ತಿಯನ್ನಿರಿಸಿರುವರು. ಸಿಂಹಾಸನದ ಒಂದು ಪಕ್ಕದಲ್ಲಿ ಒಂದು ರತ್ನಖಚಿತ ಕಿರೀಟವಿದೆ. ಅದು ಒಂದು ಗೇಣು ಎತ್ತರವಿದೆ. ಅದರ ಮೇಲ್ಭಾಗವು ದುಂಡಗಿದೆ. ತುಟ್ಟ ತುದಿಯಲ್ಲಿ ಒಂದು ಅಡಿಕೆಯ ಬೆಟ್ಟದಷ್ಟು ರತ್ನವೊಂದು ಕೂಡಿಸಲ್ಪಟ್ಟಿದೆ. ಇನ್ನೊಂದು ಪಕ್ಕ ದಲ್ಲಿ ರತ್ನಖಚಿತ ಕಾಲುಕಡಗ. ಅದರಲ್ಲಿಯೂ ಅನೇಕ ಬೆಲೆ ಯುಳ್ಳ ಮುತ್ತು ರತ್ನಗಳು ಕೂಡಿಸಲ್ಪಟ್ಟಿವೆ. ಈ ಕಾಲು ಕಡುಗವು

ಮನುಷ್ಯರ ಕೈಯಷ್ಟು ಗಾತ್ರವುಳ್ಳುದು. ಈ ಜಗುಲಿಯ ಎದುರಿಗೆ ಕಟ್ಟೆಯ ತುದಿಯಲ್ಲಿ ದಿಂಬುಗಳನ್ನಿಟ್ಟು ಗಾದಿಯನ್ನು ಹಾಸಿರುತ್ತದೆ. ಉತ್ಸವದ ವೇಳೆಯಲ್ಲಿ ಅರಸನು ಬಂದು ಕುಳಿತುಕೊಳ್ಳುವ ಸ್ಥಾನವಿದು''

"ಈ ಉತ್ಸವದರೀತಿಯೆಂದರೆ—ಅರಸನು ಒಳ್ಳೆ ನಸುಕಿನಲ್ಲಿ ಎದ್ದು ಈ ವಿಜಯಗೃಹಕ್ಕೆ ಬರುವನು. ಅಲ್ಲಿಯ ಬ್ರಾಹ್ಮಣರು ಅವನಿಗೆ ಪೂಜೆಪಾಠಗಳನ್ನು ಹೇಳುವರು. ಅರಸು ದೇವಪೂಜೆಮಾಡುವನು. ಆ ಮಂಟಪದ ಹೊರಗೆ ಅರಸನ ಪ್ರೀತಿಪಾತ್ರ ಜನರು ನೆರೆದಿರುವರು. ಚೌಕಿನಲ್ಲಿ ನರ್ತಕಿಯರು ನರ್ತನಮಾಡುತಿರುವರು. ಚೌಕಿನ ಸುತ್ತುಮುತ್ತಲಿರುವ ಬಂಕಗಳಲ್ಲಿ ದಂಡಿನ ಅಧಿಕಾರಿಗಳೂ ಊರೊಳಗಿನ ಸಭ್ಯಗೃಹಸ್ಥರೂ ಉತ್ಸವವನ್ನು ನೋಡಲೆಂದು ಬಂದು ಕುಳಿತಿರುವರು. ವಿಜಯಗೃಹದ ಕಟ್ಟೆಯ ಹತ್ತರ ಜೀನು ಹಾಕಿದ, ಅಲಂಕಾರಗಳಿಂದ ಸಿಂಗರಿಸಿದ ಹನ್ನೊಂದು ಕುದುರೆಗಳು ನಿಂತಿರುತ್ತವೆ. ಅವುಗಳ ಹಿಂದೆ ಕುದುರೆಗಳಂತೆಯೆ ಸಿಂಗಾರವಾದ ನಾಲ್ಕು ಆನೆಗಳು. ಅರಸನು ದೇವಪೂಜೆಯನ್ನು ತೀರಿಸಿಕೊಂಡು ಹೊರಗೆ ಬರುವನು. ಅವನ ಸಂಗಡ ಒಂದು ಬುಟ್ಟಿ ತುಂಬ ಬಿಳಿ ಹೂಗಳನ್ನು ತೆಗೆದುಕೊಂಡು ಬ್ರಾಹ್ಮಣನೊಬ್ಬನು ಬರುವನು. ಅರಸು ಅದರಲ್ಲಿಯ ಮೂರು ಬೊಗಸೆ ಹೂಗಳನ್ನು ತೆಗೆದುಕೊಂಡು ಕುದುರೆಗಳ ಮೇಲೆ ತೂರುವನು. ಧೂಪದೀಪಗಳನ್ನು ತೋರಿಸಿ ಆರತಿ ಬೆಳಗುವನು. ಕುದುರೆಯ ಪೂಜೆಯು ಮುಗಿದ ಮೇಲೆ ಇದೇ ಪ್ರಕಾರ ಆನೆಗಳ ಪೂಜೆಯಾಗುವುದು. ಇದಾದ ಮೇಲೆ ಬ್ರಾಹ್ಮಣನು ಕಟ್ಟೆಯನ್ನಿಳಿದು ತನ್ನ ಬುಟ್ಟಿಯಲ್ಲಿರುವ ಹೂಗಳನೆಲ್ಲ ಆನೆ ಕುದುರೆಗಳ ಮೇಲೆ ಎರಚುವನು. ಬ್ರಾಹ್ಮಣನು ತಿರುಗಿ ಬಂದ ಮೇಲೆ ಅರಸು ಮೂರ್ತಿಯಿದ್ದ ಸ್ಥಳಕ್ಕೆ ಬರುವನು. ಉತ್ಸವ

ಮೂರ್ತಿಯ ಮುಂದಿರುವ ಪರದೆಯು ಮೇಲಕ್ಕೆ ಳೆಯಲ್ಪಡುತ್ತದೆ. ಆ ಮೂರ್ತಿಯ ಮುಂದೆ ಅರಸು ಕುಳಿತ ಮೇಲೆ ಎಲ್ಲ ಪರದೆಗಳೂ ಮೇಲಕ್ಕೆಳೆಯಲ್ಪಡುತ್ತವೆ. ಆದಾಗ ೨೪ ಕೋಣಗಳನ್ನು ನೂರಾ ಇಪ್ಪತ್ತೈದು ಕುರಿಗಳನ್ನು ಬಲಿಕೊಡುವರು. ಈ ಕೆಲಸಕ್ಕಾಗಿಯೇ ನಿಯಮಿಸಲ್ಪಟ್ಟ ಅಧಿಕಾರಿಯೊಬ್ಬನಿರುವನು. ಅವನು ತನ್ನ ಒಂದೊಂದು ಹೊಡೆತದಿಂದಲೇ ಒಂದೊಂದು ಪ್ರಾಣಿಯ ರುಂಡಮುಂಡಗಳನ್ನು ಬೇರೆ ಮಾಡುವನು. ತನ್ನ ಹೊಡೆತವು ಎಂದೂ ತಪ್ಪುವುದಿಲ್ಲವೆಂಬ ವಿಶ್ವಾಸವಿರುತ್ತದವನಿಗೆ. ಈ ಬಲಿದಾನವಾದ ಮೇಲೆ ಅರಸು ಇನ್ನೊಂದು ದೇವಾಲಯಕ್ಕೆ ಹೋಗುವನು. ಅವನ ಸುತ್ತಲು ಎಲ್ಲೆಲ್ಲಿಯೂ ಬ್ರಾಹ್ಮಣರ ಸಮೂಹವು ಮುತ್ತಿರುತ್ತದೆ. ಅರಸು ಗುಡಿಯ ಸಮೀಪಕ್ಕೆ ಬರಲು ಬ್ರಾಹ್ಮಣರು ಅವನಮೇಲೆ ಪುಷ್ಪವೃಷ್ಟಿಯನ್ನು ಮಾಡುವರು. ಅರಸು ಗುಡಿಗೆ ಪ್ರದಕ್ಷಿಣೆ ಹಾಕಿಕೊಂಡು ಬಂದು ತಲೆಯಮೇಲಿನ ಕಿರೀಟವನ್ನು ಕೆಳಗಿಟ್ಟು ದೇವರಿಗೆ ಸಾಷ್ಟಾಂಗ ನಮಸ್ಕಾರ ಹಾಕುವನು. ಇದಾದಮೇಲೆ ಆ ದೇವಾಲಯದ ಒಳ ಅಂಗಣದಲ್ಲಿರುವ ತೋಟದಲ್ಲಿ ಹೋಗುವನು. ಅಲ್ಲಿ ಹೊತ್ತಿಸಿದ ಅಗ್ನಿಯಲ್ಲಿ ಮುತ್ತುರತ್ನಗಳಿಂದೊಡಗಿದ ಸುಗಂಧ ಧೂಪವನ್ನು ಹಾಕಿ ತಿರುಗಿ ದೇವಾಲಯದಲ್ಲಿ ಬರುವನು. ಅಲ್ಲಿ ತುಸು ವಿಶ್ರಾಂತಿ ತೆಗೆದುಕೊಳ್ಳುವುದರೊಳಗೆ ಅವನ ಪ್ರೀತಿಯ ಸ್ತ್ರೀಯರು ಎರಡನೆಯ ಬಾಗಿಲಿನಿಂದ ಒಳಗೆ ಬಂದು ನಮಸ್ಕರಿಸುವರು. ಆ ಮೇಲೆ ಅರಸು ಈ ಮೊದಲು ಆನೆಕುದುರೆಗಳ ಪೂಜೆಮಾಡಿದ ಸ್ಥಳಕ್ಕೆ ಬಂದು ನಿಲ್ಲುವನು. ದಂಡಿನ ಅಧಿಕಾರಿಗಳು ಸರದಾರರು ಊರ ಪ್ರಮುಖರು ಪ್ರಣಾಮ ಮಾಡುವರು. ಹಲಕೆಲವರು ಕಾಣಿಕೆಗಳನ್ನೂ ಕೊಡುವರು. ಆ ಮೇಲೆ ಎಲ್ಲರೂ ಮನೆಗೆ ತೆರಳುವರು. ಅರಸನೂ ಬದಿಯಲ್ಲಿರುವ ಬಾಗಿಲಿ

ನಿಂದ ಅರಮನೆಯ ಒಳಕ್ಕೆ ಹೋಗುವನು ಆದರೂ ಆ ಗುಡಿಯ ಮುಂದೆಯೂ ಮೂರ್ತಿಯ ಮುಂದೆಯೂ ಅದೆಷ್ಟೋ ಹೊತ್ತು ನರ್ತಕೆಯರು ಹಾಡುತ್ತ ಕುಣಿಯುತ್ತಿರುವರು. ಒಂಬತ್ತು ದಿನಗಳೂ ಇದೇಪ್ರಕಾರ ಉತ್ಸವವು ನಡೆದಿರುವುದು. ಉತ್ಸವವು ದಿನಕೊಂದು ರೀತಿ ಬೆಳೆಯುತ್ತಲೇ ಇರುವುದು.

ಮೇಲಿನದು ಮುಂಜಾವಿನ ಉತ್ಸವವಾಯಿತು. ಮಧ್ಯಾಹ್ನದ ಮೂರುಗಂಟೆಗೆ ಮತ್ತೆ ಅರಮನೆಯಲ್ಲಿ ಜನರು ನೆರೆಯುವರು. ಎಲ್ಲರಿಗೂ ಒಮ್ಮೆಲೆ ಅರಮನೆಯಲ್ಲಿ ಪ್ರವೇಶ ದೊರೆಯುವುದಿಲ್ಲ. ನಮಗೆ ಮಾತ್ರ ಒಳಗಿನ ಪಟಾಂಗಣದಲ್ಲಿ ಹೋಗಗೊಟ್ಟರು. ಜಟ್ಟಿಗಳಿಗೂ ಮಲ್ಲರಿಗೂ ನರ್ತಕಿಯರಿಗೂ ಆನೆಗಳಿಗೂ ಮಾತ್ರ ಒಳಕ್ಕೆ ಪ್ರವೇಶಿಸಲು ಅಡ್ಡಿಯಿರಲಿಲ್ಲ. ಮಾವುತರು ಪಟ್ಟೆಪಟ್ಟೆಯುಳ್ಳ ಡಗಲಿಗಳನ್ನು ಹಾಕಿಕೊಂಡಿದ್ದರು. ಅವರ ಕೈಯಲ್ಲಿ ಢಾಲುಭಾಲೆಗಳಿದ್ದುವು. ಅವರು ಒಳಗೆ ಬಂದು ಕುಸ್ತಿಯಾಡುವುದಕ್ಕಾಗಿ ಸಿದ್ಧಪಡಿಸಿದ ಸ್ಥಳದ ಸುತ್ತಲು ದುಂಡಗಾಗಿ ನಿಲ್ಲುವರು. ಈ ಕುಸ್ತಿಯ ಕಣವು ಕಟ್ಟಡದ ಮಧ್ಯದಲ್ಲಿರುವ ಮೆಟ್ಟಲುಗಳ ಸಮೀಪದಲ್ಲಿ ಮಾಡಲ್ಪಟ್ಟಿರುತ್ತದೆ. ಜಟ್ಟಿಗಳು ನರ್ತಕಿಯರು ಅಲ್ಲಿ ಹೋಗಿನಿಲ್ಲುವರು. ಆ ಗೃಹದ ಮಹಾದ್ವಾರದ ಬಳಿಯಲ್ಲಿ, ಬಂಕಗಳಲ್ಲಿ, ಕಟ್ಟೆಗಳಲ್ಲಿ, ಮೂಲೆಮೂಲೆಗಳಲ್ಲಿ ಎಲ್ಲೆಲ್ಲಿಯೂ ಜನಸಂದಣಿಯು. ಅದರಲ್ಲಿ ಬ್ರಾಹ್ಮಣರು, ಅರಸನ ಪ್ರೀತಿಪಾತ್ರರು, ಆಪ್ತೇಷ್ಟರು, ಮಿತ್ರರು, ಪ್ರೀತಿಪಾತ್ರರ ಮಕ್ಕಳು ಮರಿಗಳು ಇವರೇ ವಿಶೇಷವಾಗಿರುತ್ತಾರೆ. ಕೂಡಿದ ಜನರಲ್ಲಿ ಗೊಂದಲವಾಗಬಾರದೆಂದು ಮನೆಯ ಅಧಿಕಾರಿಗಳು ವ್ಯವಸ್ಥೆಯನ್ನಿಡುತ್ತ ತಿರುಗುತಿರುತ್ತಾರೆ. ಆ ಸ್ಥಳಕ್ಕೆ ಬೇರೆಬೇರೆ ಕಡೆಯಿಂದ ಬರುವುದಕ್ಕಾಗಿ ಬೇರೆಬೇರೆ ಬಾಗಿಲುಗಳಿವೆ. ನಿಮಂತ್ರಿತ ಜನರು ಮಾತ್ರ

ಆ ಬಾಗಿಲುಗಳಿಂದ ಒಳಗೆ ಬರುವರು.

ಈ ಸಮಾರಂಭದಲ್ಲಿ ಬರುವ ಜನರಲ್ಲಿ ಸಾಳುವ ತಿಮ್ಮರಸು ಮುಖ್ಯನು. ಅವನು ಮುಖ್ಯಮಂತ್ರಿ. ಅವನೇ ಇಲ್ಲಿಯ ಎಲ್ಲ ವ್ಯವಸ್ಥೆಯನ್ನು ಮಾಡತಕ್ಕವನು. ಈಗಿನ ಅರಸನ ಪಾಲನಪೋಷಣ ವನ್ನು ಮಾಡಿ ಅರಸನನ್ನಾಗಿ ಮಾಡಿದವನೀತನೆ. ಆದಕಾಗಿ ಅರಸು ತಂದೆಯಂತೆ ಕಾಣುವನೀತನನ್ನು. ಸಾಳುವ ತಿಮ್ಮಪ್ಪ ದೊರೆ ಎಂದು ಬಹುಮಾನಪುರಸ್ಸರವಾಗಿ ಕರೆಯುವನು. ರಾಜ್ಯದಲ್ಲಿಯ ಪಾಳಯ ಗಾರರು ಸರದಾರರು ಎಲ್ಲರೂ ಈತನಿಗೆ ಪ್ರಣಾಮ ಮಾಡುವರು. ಮಾನ ಕೊಡುವರು. ಇವನು ಉತ್ಸವ ನಡೆಯುವ ಪಟಾಂಗಣದ ಒಂದು ಬಾಗಿಲಿನ ಬಳಿ ನಿಂತು ಅಲ್ಲಿಂದಲೇ ಅನೇಕ ಮಾತುಗಳ ಬಗ್ಗೆ ಅಪ್ಪಣೆ ಕೊಡುತ್ತ ಉತ್ಸವಕ್ಕೆ ಬೇಕಾದ ಸಾಮಾನುಗಳನ್ನು ಪೂರೈಸುತ್ತ ವ್ಯವಸ್ಥೆ ಮಾಡುತಿರುವನು.

ಎಲ್ಲವೂ ವ್ಯವಸ್ಥಿತವಾಗಿ ಸಿದ್ಧವಾದ ಬಳಿಕ ಅರಸು ಈ ಮೊದಲು ಹೇಳಿದ ಜಗುಲಿಯ ಮೇಲೆ ಹೋಗಿ ಸಿಂಹಾಸನದ ಮೇಲೆ ಕುಳಿತುಕೊಳ್ಳುವನು. ರಾಜಚಿಹ್ನೆಗಳೂ ಅಲ್ಲಿಯೇ ಇರುವವು. ಸಿಂಹಾ ಸನದಲ್ಲಿ ಕುಳಿತುಕೊಳ್ಳಲು ಅಲ್ಲಿದ್ದ ಜನರೆಲ್ಲ ಅರಸನಿಗೆ ಪ್ರಣಾಮ ಮಾಡುವರು. ಈ ಕ್ರಮವೆಲ್ಲ ಆದಮೇಲೆ ಜಟ್ಟಿಗಳು ಕಣಕ್ಕಿಳಿದು ಕುಳಿತುಕೊಳ್ಳುವರು. ಅರಸನಿದಿರು ಜಟ್ಟಿಗಳು ವೇಶ್ಯೆಯರು ಮಾತ್ರ ಕುಳಿತುಕೊಳ್ಳಬಹುದು. ವೀಳ್ಯ ಮೆಲ್ಲಬಹುದು. ಉಳಿದವರಾರೂ ಅವರು ಸರದಾರರಿರಲಿ ಮಾಂಡಲಿಕರಿರಲಿ ಅರಸನಪ್ಪಣೆಯಿಲ್ಲದೆ ಕುಳಿತು ಕೊಳ್ಳುವಂತಿಲ್ಲ, ವೀಳ್ಯಮೆಲ್ಲುವಂತಿಲ್ಲ. ಅರಸು ತಾನು ಸಿಂಹಾ ಸನದಲ್ಲಿ ಕುಳಿತುಕೊಂಡ ಮೇಲೆ ಅರಸು ಮನೆತನಕ್ಕೆ ಸಂಬಂಧಿಸಿದ ಮೂವರು ನಾಲ್ವರಿಗೆ ಬಳಿಯಲ್ಲಿ ಕುಳಿತುಕೊಳ್ಳಲು ಹೇಳುವನು.

ಅವರು ಮಾಂಡಲಿಕ ಅರಸರಾಗಲಿ ಅರಸನಿಗೆ ಹೆಣ್ಣುಕೊಟ್ಟವರಾಗಲಿ ಇರುವರು. ಇಂತಹರಲ್ಲಿ ಮಲಬಾರದ ಎಲ್ಲ ಪ್ರದೇಶಕ್ಕೂ ಶ್ರೀರಂಗಪಟ್ಟಣಕ್ಕೂ ಒಡೆಯನಾದ ಮಾರವೀರ್ಯನು ಮುಖ್ಯನು. ಅವನು ಅದೇ ಜಗುಲಿಯ ಮೇಲೆ ಅರಸನಿಂದ ಕೆಲವೊಂದು ಅಂತರದಮೇಲೆ ಕುಳಿತುಕೊಳ್ಳುವನು. ಉಳಿದವರು ಅವನ ಹಿಂದೆ ಕುಳಿತುಕೊಳ್ಳುವರು.

ಈ ವೇಳೆಯಲ್ಲಿ ಅರಸನು ಬಿಳಿಯ ವಸ್ತ್ರವನ್ನು ಧರಿಸಿರುವನು. ಅವುಗಳಮೇಲೆ ಅಲ್ಲಲ್ಲಿ ಜರದ ಹೂಗಳನ್ನು ತೆಗೆದಿರುವರು. ಮೈಮೇಲೆ ರತ್ನಖಚಿತ ಅಲಂಕಾರಗಳು ಒಪ್ಪುತಿರುವವು. ಯಾವಾಗಲೂ ಅರಸು ಇದೇ ಉಡುಪಿನಲ್ಲಿಯೆ ಇರುವನು. ಹಡಪವಳರು, ಅಂಗರಕ್ಷಕರು, ಇನ್ನಿತರರು ರಾಜಚಿಹ್ನಗಳನ್ನು ಹಿಡಿದುಕೊಂಡು ಅವನ ಹಿಂದೆ ಹತ್ತರದಲ್ಲಿಯೇ ನಿಂತಿರುವರು. ಸಿಂಹಾಸನದ ಮೇಲೆ ದೇವಿಯ ಮೂರ್ತಿ ಹತ್ತಿರದಲ್ಲಿಯೆ ಬ್ರಾಹ್ಮಣರು ನಿಂತು ಬಂಗಾರದ ಹಿಡಿಕೆಗಳುಳ್ಳ ಚಾಮರಗಳನ್ನು ಬೀಸುತಿರುವರು. ಈ ಚಾಮರವು ಬಹು ದೊಡ್ಡ ಮರ್ಯಾದೆ. ಅರಸನ ಮೇಲೆಯೂ ಇಂತಹ ಚಾಮರಗಳನ್ನು ಬೀಸುವರು.

ಅರಸನು ಕುಳಿತುಕೊಳ್ಳಲು ಹೊರಗೆ ಕಾಯುತಿದ್ದ ಸೇನಾಪತಿಗಳು ಚಿಕ್ಕಪುಟ್ಟ ಸರದಾರರು ಇನ್ನಿತರರು ತಮ್ಮ ತಮ್ಮ ಪರಿವಾರದೊಂದಿಗೆ ಒಳಗೆಬಂದು ಅರಸನಿಗೆ ನಮಸ್ಕರಿಸಿ ತಮ್ಮ ಸ್ಥಳಗಳಿಗೆ ಹೋಗುವರು. ಅವರಾದಮೇಲೆ ಸೇನಾನಾಯಕರು ಢಾಲು ಭಲ್ಲೆಗಳನ್ನು ಹಿಡಿದುಕೊಂಡು ಬರುವರು. ಅವರ ಹಿಂದೆ ಬಿಲ್ಲುಗಾರರು ನಾಯಕರು ಬರುವರು. ಇವರೆಲ್ಲರೂ ಕಣದ ಹತ್ತಿರ ಆನೆಗಳ ಎದುರು ಬದಿಗೆ ದುಂಡಗಾಗಿ ನಿಂತು ಅರಸನ ಹತ್ತಿರ ಯಾರೂ

ಹೋಗದಂತೆ ಕಾಯುತ್ತ ನಿಲ್ಲುವರು. ಈ ಪ್ರಕಾರ ಸೇನಾನಾಯಕರು ನಿಂತ ಮೇಲೆ ನರ್ತಕಿಯರ ನರ್ತನಕ್ಕೆ ಆರಂಭವಾಗುವುದು. ಕೆಲವರು ಪ್ರವೇಶದ್ವಾರದಲ್ಲಿರುವ ದುಂಡನ್ನ ಮೇಲು ಹುಸಿಗಳಲ್ಲಿ ಹೋಗಿ ನಿಲ್ಲುವರು. ಈ ಹೆಂಗಸರ ಮೈಮೇಲಿನ ಆಭರಣಗಳನ್ನು ವರ್ಣಿಸು ವುದು ಆದಾರಿಗೂ ಶಕ್ಯವಿಲ್ಲ. ಅವರ ಕೊರಳೊಳಗಿನ ಮುತ್ತು ಮಾಣಿಕ ಪಚ್ಚ ಮೊದಲಾದ ರತ್ನಗಳಿಂದ ಕೆಚ್ಚಿದ ಆ ಅಲಂಕಾರ ಗಳು, ಮುಂಗೈಯೊಳಗಿನ ಬಳೆಗಳು, ಭುಜಕೀರ್ತಿಗಳು, ಆ ಸೊಂಟದ ಮೇಲಿನ ಪಟ್ಟಿಗಳು, ಕಾಲುಕಡಗ ನೂಪುರಗಳು ಒಂದೊ ಎರಡೊ! ಇಂತಹ ಕೀಳು ಉದ್ಯೋಗಮಾಡುವ ಸ್ತ್ರೀಯರಲ್ಲಿ ಇಷ್ಟೊಂದು ಸಂಪತ್ತಿ ಯಿರುವುದೇ ಆಶ್ಚರ್ಯಕರವಾಗಿದೆ. ಇದರಲ್ಲಿಯು ಕೆಲವರಿಗೆ ಭೂಮಿ ಗಳು ಉಂಬಳಿಯಾಗಿವೆ. ಮೇಣೆಗಳು ದಾಸದಾಸಿಯರೂ ಇರುವರು. ಇಲ್ಲಿಯ ಒಬ್ಬೊಬ್ಬ ಸ್ತ್ರೀಯಳ ಹತ್ತಿರ ಒಂದು ಲಕ್ಷ ಹೊನ್ನುಗಳ ಸಂಪತ್ತಿಯಿದೆಯಂತೆ. ನಾನು ನೋಡಿದುದರ ಮೇಲಿಂದ ಇದು ನಿಜವಿದ್ದಂತೆಯೂ ತೋರುತ್ತದೆ.

ಜಟ್ಟಿಗಳ ಕುಸ್ತಿಗೆ ಪ್ರಾರಂಭವಾಯಿತು. ನಮ್ಮ ಕಡೆಯ ಕುಸ್ತಿಗೂ ಈ ಕುಸ್ತಿಗೂ ಆದೆಷ್ಟೊ ಅಂತರ. ಅವರ ಹೊಡೆತಗಳಲ್ಲಿ ಹಲ್ಲುಗಳು ಮುರಿಯುವವು ಕಣ್ಣುಗಳು ಒಡೆಯುವವು ಮುಖವು ವಿದ್ರೂಪವಾಗು ವುದು. ಕೆಲವೇಳೆ ಜಟ್ಟಿಗಳು ಮೂರ್ಛೆ ಹೊಂದುವುದೂ ಉಂಟು ಆಗ ಅವರ ಮಿತ್ರರು ಬಂದು ಎತ್ತಿಕೊಂಡು ಹೋಗುವರು. ಕುಸ್ತಿ ಯಲ್ಲಿ ಜಟ್ಟಿಗಳು ಒಬ್ಬರನ್ನೊಬ್ಬರು ಚೆನ್ನಾಗಿಯೇ ಎತ್ತಿ ಒಗೆಯುವರು. ಅಲ್ಲಿದ್ದ ಪರೀಕ್ಷಕರು ಜಟ್ಟಿಗಳನ್ನು ಯೋಗ್ಯ ಸ್ಥಳದಲ್ಲಿ ನಿಲ್ಲಿಸಿ ಕುಸ್ತಿಯಾಡಿಸಿ ಒಗೆದವನಿಗೆ ಮರ್ಯಾದೆ ಮಾಡುವರು.

ಕುಸ್ತಿಕುಣಿತಗಳ ಕಾರ್ಯಕ್ರಮವು ಮೂರುಗಂಟೆಯಿಂದ

ಸಾಯಂಕಾಲದ ವರೆಗೂ ನಡೆಯುವುದು. ಸೂರ್ಯಾಸ್ತವಾಗುತ್ತಲೆ ಅಸಂಖ್ಯ ದೀವಟಿಗೆಗಳು ಕಕ್ಕಡಗಳು ಉರಿಯ ತೊಡಗುವುವು. ಅದರಿಂದ ಅದೆಲ್ಲೆಲ್ಲಿಯೂ ಹಗಲಿನಂತೆ ಪ್ರಕಾಶ. ಹತ್ತರದ ಕುಂಬಿಗಳ ಮೇಲೆಯೂ ಕೋಟಿಕೊತ್ತಳಗಳ ಮೇಲೆಯೂ ಸಹ ದೀವಟಿಗೆಗಳನ್ನು ಹಚ್ಚಿಟ್ಟಿರುತ್ತಾರೆ. ಅರಸನು ಕುಳಿತ ಸ್ಥಳದಲ್ಲಂತೂ ಹೇಳಲಿಕ್ಕೇ ಬೇಡ. ಎಲ್ಲಿನೋಡಿದಲ್ಲಿ ದೀವಟಿಗೆಯ ಕಂಬಗಳೆ. ಈ ಪ್ರಕಾರ ಬೆಳಕಾದ ಮೇಲೆ ನಾನಾತರದ ಚಮತ್ಕಾರದ ಆಟಗಳು, ಸೂತ್ರಗೊಂಬೆಗಳಾಟಗಳು ಪ್ರಾರಂಭವಾಗುವುವು. ಅವರು ತುಸುತುಸು ವೇಳೆ ಆಡಿ ಹಿಂದೆ ಸರಿದ ಮೇಲೆ ಮರಗಾಲುಗಳನ್ನು ಕಟ್ಟಿಕೊಂಡು ಕೃತ್ರಿಮ ಕುದುರೆಗಳ ಮೇಲೆ ಕುಳಿತುಕೊಂಡವರು ಯುದ್ಧಮಾಡುವವರಂತೆ ನಟಿಸುತ್ತ ಬರುವರು. ಈ ಕುದುರೆಗಳು ಪೋರ್ಚುಗಾಲದಲ್ಲಿ ಕಾರ್ಪೊಸಿ ಡಿಯೊಸನ ಉತ್ಸವದಲ್ಲಿಯ ಕಟ್ಟಿಗೆಯ ಕುದುರೆಗಳಂತಿರುತ್ತವೆ. ಈ ಆಟನೋಟಗಳಾದ ಮೇಲೆ ಮದ್ದು ಬಾಣ ಬಿರುಸುಗಳಿಗೆ ಪ್ರಾರಂಭವಾಗುತ್ತದೆ. ಅವುಗಳಿಂದ ನಾನಾತರದ ಹೂಗಿಡಗಳು ಜಾಲರಿಗಳು ಉಂಟಾಗುವುವು. ಕೆಲವುಗಳು ಹಾರಿದ ಮೇಲೆ ಆಕಾಶದಲ್ಲಿ ದೊಡ್ಡ ಸಪ್ಪಳವಾಗಿ ನಾನಾ ಬಣ್ಣದ ಚುಕ್ಕೆಗಳು ತೋರುವುವು.

ಮದ್ದುಬಾಣ ಬಿರುಸುಗಳ ಕಾರ್ಯಕ್ರಮವಾದ ಮೇಲೆ ದಂಡಿನ ಅಧಿಕಾರಿಗಳ ರಥಗಳನ್ನು ಸಂದರ್ಶಿಸುವ ಕೆಲಸವು ನಡೆಯುವುದು. ಇವುಗಳಲ್ಲಿ ಬಹುಸಂಖ್ಯಾಕ ರಥಗಳು ಪರಚಕ್ರಗಳ ಮೇಲೆ ದಂಡೆತ್ತಿ ಹೋದ ಇಲ್ಲವೆ ಬೇಟೆಗೆಹೋದ ಸೇನಾಪತಿಗಳು ಕಳುಹಿದಂತಹವು ಇರುತ್ತವೆ. ಸಾಳುವ ತಿಮ್ಮರಸನ ರಥವು ಎಲ್ಲಕ್ಕೂ ಮುಂದಿರುತ್ತದೆ. ಅದಕ್ಕೆ ಹಿಂದೆ ಯೋಗ್ಯತೆಗನುಸರಿಸಿ ಬೇರೆಯವರ ರಥಗಳು ಸಾಲುಗೊಂಡಿರುತ್ತವೆ. ಕೆಲವು ರಥಗಳು ಬೆಲೆಯುಳ್ಳ ವಸ್ತ್ರಗಳಿಂದ

ಆಚ್ಛಾದಿತವಾದುವುಗಳಿರುತ್ತವೆ. ಆ ವಸ್ತ್ರಗಳ ಮೇಲೆ ನರ್ತಕಿಯರ ಹಾಗೂ ಬೇರೆ ಸ್ತ್ರೀಪುರುಷರ ಚಿತ್ರಗಳನ್ನು ತೆಗೆದಿರುತ್ತಾರೆ. ಹಲವು ರಥಗಳು ಒಂದಕ್ಕಿಂತ ಹೆಚ್ಚು ಅಂತಸ್ತುಗಳುಳ್ಳವುಗಳಿರುತ್ತವೆ. ಅವೆಲ್ಲವೂ ಬಹುತರ ಒಂದೇ ತರವವಿದ್ದು ಒಂದಾದಮೇಲೊಂದು ಕ್ರಮದಿಂದ ಅರಸನಿದಿರು ಹಾಯ್ದು ಹೋಗುತ್ತವೆ.

ರಥಗಳ ಹಿಂದಿನಿಂದ ಕುದುರೆಯ ಸಾಲು ಬರುವುದು. ಒಳ್ಳೇ ವಸ್ತ್ರಗಳ ಜೂಲಿನಿಂದಲೂ ನಾನಾತರದ ಆಭರಣಗಳಿಂದಲೂ ಅವನ್ನು ಸಿಂಗರಿಸಿರುವರು. ಎಲ್ಲಕ್ಕೂ ಮುಂದೆ ಒಂದು ಅಪ್ರತಿಮವಾದ ಕುದುರೆಯಿದ್ದಿತು. ಅದಕ್ಕೆ ಎರಡೂ ಬದಿಗೆ ಎರಡು ಛತ್ರಗಳನ್ನು ಹಿಡಿದಿದ್ದರು. ಎಲ್ಲ ಕುದುರೆಗಳಿಗಿಂತಲೂ ಹೆಚ್ಚು ಸಿಂಗರಿಸಿದ ಕುದುರೆಯಿದು. ಇದು ಅರಸನ ಪ್ರೀತಿಯ ಕುದುರೆ. ಅರಸನ ಸೇವಕನೊಬ್ಬನು ಅದರ ಕಡಿವಾಣವನ್ನು ಹಿಡಿದುಕೊಂಡು ಹೋಗುತಿದ್ದನು. ಇದರ ಮುಂದೆ ಇವರಂತೆಯೇ ಸಿಂಗಾರಾಗಿ ಬೇರೊಂದು ಕುದುರೆಯು ಕುಣಿಯುತ್ತ ನೆಗೆಯುತ್ತ ಬೇರೆಬೇರೆ ನಡಿಗೆಗಳಿಂದ ನಡೆಯುತ್ತ ಹೋಗುತಿದ್ದಿತು. ಈ ಕಲೆಯನ್ನು ಅವುಗಳಿಗೆ ಚೆನ್ನಾಗಿ ಕಲಿಸಿರುವರು. ಈ ಸಿಂಗರಿಸಿದ ಕುದುರೆಯು ಪಟ್ಟದ ಕುದುರೆಯು. ಅದಕ್ಕೆ ಅರಸನಷ್ಟು ಸನ್ಮಾನ. ಅರಸು ಸಿಂಹಾಸನವನ್ನೇರುವ ಪೂರ್ವದಲ್ಲಿ ಈ ಕುದುರೆಯನ್ನು ಮುಟ್ಟಿ ಆಣೆಯಿಡುವನು. ಒಬ್ಬ ಅರಸನ ತರುವಾಯ ಪಟ್ಟಕ್ಕೆ ಬರುವ ಮತ್ತೊಬ್ಬ ಅರಸನೂ ಆ ಕುದುರೆಯನ್ನು ಮುಟ್ಟಿ ಆಣೆಯಿಡಲೇಬೇಕು. ಒಂದು ಕುದುರೆಯು ಸತ್ತರೆ ಅದರ ಸ್ಥಳದಲ್ಲಿ ಬೇರೊಂದನ್ನು ತರುವರು. ಯಾವನೊಬ್ಬ ಅರಸು ಕುದುರೆಯನ್ನು ಮುಟ್ಟಿ ಆಣೆಯಿಡಲು ಒಪ್ಪದಿದ್ದರೆ ಆನೆಯನ್ನಾದರೂ ಮುಟ್ಟಿ ಆಣೆಯಿಡಬೇಕಾಗುವುದು. ಆ ಆನೆಗೂ ಈ ಕುದುರೆಯಷ್ಟೇ ಮರ್ಯಾದೆ.

ಈ ಪ್ರಕಾರ ಪರಿವಣಿಗೆಯೊಂದಿಗೆ ಎಲ್ಲ ಕುದುರೆಗಳು ಆರೇಳುಸಾ ಸಾಲಾಗಿ ಹೋಗಿ ನಿಲ್ಲುವವು. ಎಲ್ಲಕ್ಕೂ ಮುಂದು ಅರಸನ ಕುದುರೆಯಿರುವುದು. ಅದರ ಹತ್ತಿರ ವಿಶೇಷ ಗೊಂದಲವಿರುವುದಿಲ್ಲ. ಎಲ್ಲ ಕುದುರೆಗಳು ವ್ಯವಸ್ಥಿತವಾಗಿ ನಿಂತವೇಲೆ ರಾಜಪುರೋಹಿತನು ಇನ್ನಿಬ್ಬರು ಬ್ರಾಹ್ಮಣರೊಂದಿಗೆ ಬೆಳ್ಳಿಯ ತಟ್ಟೆಯಲ್ಲಿ ಪೂಜೆಯಸಾಹಿತ್ಯಗಳನ್ನು ತೆಗೆದುಕೊಂಡು ನೀರಿನ ಕಲಶಗಳನ್ನು ಹಿಡಿದುಕೊಂಡು ಬಂದು ಕುದುರೆಗಳಿಗೆ ಪ್ರದಕ್ಷಿಣೆ ಹಾಕಿ ಪೂಜಿಸಿ ಹೋಗುವನು.

ಆ ಮೇಲೆ ಒಳಗಿನಿಂದ ೨೫-೩೦ಜನ ದ್ವಾರಪಾಲಿಕೆಯರು ಕೈಯಲ್ಲಿ ಬೆಳ್ಳಿಬಂಗಾರಗಳ ತಗಡುಗಳ ಕಟ್ಟು ಹಾಕಿದ ಬೆತ್ತಗಳನ್ನು ಹಿಡಿದುಕೊಂಡು ಬರುವರು ಅವರ ಹೆಗಲ ಮೇಲೆ ಚಬಕಗಳು ಜೋಲುತಿರುವವು. ಇವರ ಹಿಂದು ಹಲವರು ಷಂಢಸೇವಕರು, ಮದ್ದಳೆ ತುತೂರಿ ಕಿನ್ನರಿ ಕೊಳಲು ಮೊದಲಾದ ವಾದ್ಯಗಳನ್ನು ಬಾರಿಸುವ ಸ್ತ್ರೀಯರು ಬರುವರು. ಈ ವಾದ್ಯಗಳು ನಮ್ಮಲ್ಲಿಯ ವಾದ್ಯಗಳಿಂದ ಭಿನ್ನವಾಗಿರುವವು. ವಾದ್ಯಗಳ ಸ್ತ್ರೀಯರ ಹಿಂದಿನಿಂದ ಬೆಳ್ಳಿಯ ಹೊದಿಕೆಯ ಬೆತ್ತಗಳನ್ನು ಹಿಡಿದುಕೊಂಡು ೨೦ಜನ ಸ್ತ್ರೀಯರು ಬರುವರು. ಇವರ ಸಂಗಡಲೇ ಕೆಳಗಿನಂತೆ ವಸ್ತ್ರಾಲಂಕಾರಗಳಿಂದಲಂಕೃತರಾದ ಸ್ತ್ರೀಯರು ಬರುವರು. ಅವರು ಪೀತಾಂಬರಗಳನುಟ್ಟು ತಲೆಯಮೇಲೆ ಉದ್ದನ್ನ ಟೊಪ್ಪಿಗೆಗಳನ್ನು ಹಾಕಿಕೊಂಡಿದ್ದರು. ಅವುಗಳಿಗೆ ಕುಲಾಯಿ ಎನ್ನುವರು ಆ ಕುಲಾಯಿಗಳಿಗೆ ಮುತ್ತಿನ ತುರಾಯಿಗಳನ್ನೂ, ಜಾಲರಿಗಳನ್ನೂ ಹಚ್ಚಿದ್ದರು. ಆ ಸ್ತ್ರೀಯರ ನಡುವಿನಲ್ಲಿ ಬಂಗಾರದ ಪಟ್ಟಿಗಳಿದ್ದುವು. ಅವು ಮುತ್ತುರತ್ನ ಕೆತ್ತಿನವು ಅವರ ಎದೆಯ ಮೇಲೆಯೂ ಭುಜಗಳ ಮೇಲೆಯೂ ಮುತ್ತಿನ ಉದ್ದನ್ನ ಸರಗಳು ಜೋಲಾಡುತಿದ್ದುವು. ಕೈಗಳಲ್ಲಿ ರತ್ನಜಡಿತ ಕಂಕಣಗಳು, ಭುಜದಲ್ಲಿ

ಬಾಜುಬಂದಗಳು ಒಪ್ಪುತಿದ್ದುವು. ಸೊಂಟದ ಮೇಲೆ ಒಂದರ ಕೆಳ ಗೊಂದು ಮುತ್ತು ರತ್ನಗಳಿಂದ ಕೆಚ್ಚಿದ ಬಂಗಾರದ ಪಟ್ಟಿಗಳು ತೊಡೆಯವರೆಗೂ ಜೋಲುಬಿದ್ದಿದ್ದುವು. ಕಾಲುಗಳಲ್ಲಿ ರತ್ನಖಚಿತ ಕಾಲುಕಡಗಗಳೂ ಮುತ್ತಿನಸರಗಳೂ ಇದ್ದುವು. ಅವೂ ಉಳಿದ ಅಲಂ ಕಾರಗಳಂತೆ ಬಹು ಬೆಲೆಬಾಳುವಂತಹವೆ. ಅವರ ಕೈಗಳಲ್ಲಿ ನೀರಿನ ದೊಡ್ಡ ಪಾತ್ರೆಯಷ್ಟು ಕಲಶಗಳಿದ್ದು ಅವಕ್ಕೆ ಒಳಗೂ ಹೊರಗೂ ಮೇಣವಲ್ಲಿ ಕೂಡಿಸಿದ ರತ್ನಮಾಲೆಗಳು ನೇತಾಡುತ್ತಿದ್ದುವು. ಆ ಕಲಶ ದಲ್ಲಿ ನೀರಾಂಜನವು ಉರಿಯುತಿದ್ದಿತು. ಇಂತಹ ೬೦ ಜನ ಸ್ತ್ರೀಯರು ಒಬ್ಬರಹಿಂದೊಬ್ಬರು ಕ್ರಮದಿಂದ ಹೊರಗೆ ಬಂದರು. ಒಳ್ಳೇ ಸುಂದರಿ ಯರವರು. ಆದಾಗಲೆ ತಾರುಣ್ಯದಲ್ಲಿ ಕಾಲಿಟ್ಟವರು. ೧೫--೨೦ ವರ್ಷ ವಯಸ್ಸಿನವರು. ಅವರಲ್ಲಿಯ ಒಬ್ಬೊಬ್ಬರ ಮೈಮೇಲಿನ ಅಲಂಕಾರಗಳನ್ನೂ ಅವುಗಳ ಬೆಲೆಯನ್ನೂ ಹೇಳುವುದು ಎಂತಹನಿಗೂ ಸಾಧ್ಯವಿಲ್ಲ. ಅವರಲ್ಲಿಯ ಹಲವರಿಗೆ ತಾವಿಟ್ಟುಕೊಂಡ ಅಲಂಕಾರ ಗಳ ಭಾರವನ್ನು ಸಹಿಸುವುದೂ ಶಕ್ಯವಾಗದೆ ಜೋಲಿಹೊಡೆಯು ತಿದ್ದರು. ಸಂಗಡವಿದ್ದ ಬೇರೆ ದಾಸಿಯರು ಅವರನ್ನು ಸಾವರಿಸಿ ಹಿಡಿಯಬೇಕಾಗುತಿದ್ದಿತು. ಇಂತಹ ಅಪ್ರತಿಮ ವೈಭವದಿಂದ ಅವರು ಕುದುರೆಗಳ ಸುತ್ತಲು ಮೂರುಸಾರೆ ಪ್ರದಕ್ಷಿಣೆ ಹಾಕಿ ಅರಮನೆ ಯೊಳಗೆ ಹೋಗುವರು. ಇವರು ಅರಸಿಯರ ಹತ್ತಿರಿರುವ ಮಾನದ ತೊತ್ತುಗಳು. ಈ ನವರಾತ್ರಿಯ ಉತ್ಸವದಲ್ಲಿ ಒಂದೊಂದು ದಿವಸ ಒಬ್ಬೊಬ್ಬ ಅರಸಿಯ ಕಡೆಯಿಂದ ಇಂತಹ ತೊತ್ತುಗಳು ಸಿಂಗಾರಾಗಿ ಬರುವರು. ರಾಜಾಜ್ಞೆಯ ಮೇರೆಗೆ ಪೂರ್ವಾಪರ ರೂಢಿಗನುಸರಿಸಿ ಒಬ್ಬೊಬ್ಬ ಅರಸಿಗೆ ಒಂದೊಂದು ದಿವಸವು ಗೊತ್ತುಮಾಡಲ್ಪಟ್ಟಿರು ತ್ತದೆ. ಆ ಗೊತ್ತುವಳಿಗನುಸರಿಸಿಯೇ ಬೇರೆಬೇರೆ ದಿವಸ ಬೇರೆಬೇರೆ

ಅರಸಿಯರು ತಮ್ಮ ತೊತ್ತುಗಳನ್ನು ಕಳಿಸಿಕೊಡುವರು. ಪ್ರತಿಯೊಬ್ಬ ಅರಸಿಯ ತೊತ್ತುಗಳು ತಮ್ಮ ಅಲಂಕಾರ ವೈಭವಗಳ ವಿಜೃಂಭಣೆಯನ್ನು ತೋರಿಸುವುದಕ್ಕಾಗಿಯೇ ಹೆಚ್ಚುಹೆಚ್ಚು ಬೆಲೆಯುಳ್ಳ ವಸ್ತ್ರಾಲಂಕಾರಗಳನ್ನು ಧರಿಸಿಕೊಂಡು ಬರುವರು.

ಈ ಸ್ತ್ರೀಯರು ಹೋದಮೇಲೆ ಕುದುರೆಗಳೂ ಹೋಗುತ್ತವೆ. ಆಗ ಆನೆಗಳು ಮುಂದೆ ಬರುವವು. ಅವು ಸೊಂಡೆಯನ್ನೆತ್ತಿ ಅರಸನಿಗೆ ನಮಸ್ಕಾರ ಮಾಡಿ ಹೋಗುವವು. ಇಷ್ಟಾದಮೇಲೆ ಆ ಗೃಹದ ಚಿಕ್ಕ ಬಾಗಿಲಿನಿಂದ ಅರಸು ಅರಮನೆಯೊಳಗೆ ಹೋಗುವನು. ಆ ಮೇಲೆ ಬ್ರಾಹ್ಮಣರು ಉತ್ಸವಮೂರ್ತಿಯನ್ನು ತಿರುಗಿ ಮಂಟಪದಲ್ಲೊಯ್ಯುವರು. ಅರಸು ತಿರುಗಿ ಬಂದು ಆ ಮಂಟಪದಲ್ಲಿ ಮೂರ್ತಿಯ ಪೂಜೆಮಾಡುವನು. ಮತ್ತೆ ಕುರಿಕೋಣಗಳ ಬಲಿದಾನವಾಗುವುದು. ನರ್ತಕಿಯರ ನರ್ತನವಾಗುವುದು. ಇದೆಲ್ಲ ವಿಧಿಯಾಗುವ ವರೆಗೆ ಅರಸನು ಉಪವಾಸವೇ ಇರುವನು. ಬಲಿದಾನದ ತರುವಾಯ ಅಂತಃಪುರಕ್ಕೆ ಹೋಗಿ ಊಟಕ್ಕೆ ಹೋಗುವನು. ನವರಾತ್ರಿಯಲ್ಲಿ ಈ ಜನರು ಉಪವಾಸ ಮಾಡುವರು. ಮಧ್ಯರಾತ್ರಿಗೆ ಪಾರಣೆ. ಅರಸು ಹೊರಟು ಹೋದ ಮೇಲೆಯೂ ದೇವರ ಮೂರ್ತಿಯ ಮುಂದೆ ಅದೆಷ್ಟೋ ಹೊತ್ತು ನರ್ತನವು ನಡೆದೇ ಇರುತ್ತದೆ.

ಇದೇ ಕ್ರಮದಲ್ಲಿ ಒಂಬತ್ತು ದಿವಸವೂ ಉತ್ಸವ ನಡೆಯುವುದು. ಕೊನೆಯ ದಿವಸ ಇನ್ನೂರೈವತ್ತು ಕೋಣಗಳನ್ನೂ ನಾಲ್ಕು ಸಾವಿರ ಐನೂರು ಕುರಿಗಳನ್ನೂ ದೇವಿಗೆ ಬಲಿಕೊಡುವರು.

ಉತ್ಸವವೆಲ್ಲ ಮುಗಿದಮೇಲೆ ಅರಸು ತನ್ನ ದಂಡಿನ ನಿರೀಕ್ಷಣೆ ಮಾಡುವನು. ಅದರ ರೀತಿಯಿದು.—

ಅರಸನಾಜ್ಞೆಯಿಂದ ಪಟ್ಟಣದ ಹೊರಗೆ ಒಂದು ಹರದಾರಿ

ಅಂತರವಲ್ಲಿ ಒಂದು ಸ್ಥಳದಲ್ಲಿ ಭವ್ಯ ಮಂಟಪವೊಂದನ್ನು ರಚಿಸುವರು. ನವರಾತ್ರಿ ಉತ್ಸವ ಮೂರ್ತಿಯನ್ನೊಯ್ದು ಅಲ್ಲಿ ಪ್ರತಿಷ್ಠೆ ಮಾಡುವರು. ಈ ಮಂಟಪದ ಸ್ಥಳದಿಂದ ಅರಮನೆಯವರೆಗಿನ ಬೀದಿಯ ಎರಡೂ ಬದಿಯಲ್ಲಿ ಸೇನಾನಾಯಕರು ತಮ್ಮತಮ್ಮ ಸೇನೆಯನ್ನು ಅವರವರ ಯೋಗ್ಯತೆಯ ಕ್ರಮದಲ್ಲಿ ನಿಲ್ಲಿಸುವರು. ಇಂತಹ ಒಂದೇ ಸಾಲು ಇರುತ್ತದೆಂದಲ್ಲ: ಎರಡೆರಡು ಮೂರುಮೂರು ಸಾಲುಗಳೂ ಇರುತ್ತವೆ. ಕೆರೆಕಟ್ಟೆಗಳಿದ್ದಲ್ಲಿ ಅದಕ್ಕೆ ಸುತ್ತುವರಿದು, ಇಕ್ಕಟ್ಟಿನ ಸ್ಥಳವಿದ್ದಲ್ಲಿ ಅದಕ್ಕೆ ಹೊಂದಿರುವ ಬೈಲು ಸ್ಥಳಗಳಲ್ಲಿ, ದಿನ್ನೆ ಗುಡ್ಡಗಳು ಇದ್ದಲ್ಲಿ ಅವುಗಳ ಇಳುಕಲಿನ ಮೇಲೆ ಶಿಖರದ ಮೇಲೆ ನಿಂತುಕೊಳ್ಳುವರು. ದಿನ್ನೆಯಿರಲಿ ಬಯಲಿರಲಿ ತಗ್ಗು ಇರಲಿ ಮಿಟ್ಟೆಯಿರಲಿ ಅದೆಲ್ಲೆಲ್ಲಿಯೂ ದಂಡಾಳುಗಳು; ದಂಡಾಳುಗಳಿಲ್ಲದ ಸ್ಥಳವೇ ಇಲ್ಲ. ಎಲ್ಲಕ್ಕೂ ಮುಂದೆ ಕಾಲಾಳುಗಳು, ಕಾಲಾಳುಗಳ ಹಿಂದೆ ರಾವುತರು, ಅವರ ಹಿಂದೆ ಆನೆಗಳು ಈ ಕ್ರಮದಲ್ಲಿ ಸೇನೆಯನ್ನು ನಿಲ್ಲಿಸಿ ಎಲ್ಲಕ್ಕೂ ಮುಂದೆ ಸೇನಾಧ್ಯಕ್ಷನು ನಿಂತುಕೊಳ್ಳುವನು. ಪಟ್ಟಣದಲ್ಲಿಯ ಪಾಳಯಕ್ಕೆ ಬೀದಿಯಲ್ಲಿಯೂ ಮಾಳಿಗೆಯ ಮೇಲೆಯೂ ನಿಲ್ಲುವುದು ಶಕ್ಯವಿಲ್ಲದುದರಿಂದ ಓಣಿಗಳ ಬಾಯಿಯಲ್ಲಿ ಅಟ್ಟಗಳನ್ನು ಹಾಕಿ ಅವುಗಳ ಮೇಲೆ ನಿಲ್ಲಿಸಿದ್ದರು. ಹೀಗೆ ಪಟ್ಟಣದ ಹೊರಗೆ ಒಳಗೆ ಎಲ್ಲಿ ನೋಡಿದಲ್ಲಿ ದಂಡಾಳುಗಳೇ ದಂಡಾಳುಗಳು.

ರಾವುತರ ಕುದುರೆಗಳೆಲ್ಲವು ಜೀನುಹಾಕಿ ಸಿಂಗರಿಸಲ್ಪಟ್ಟಿದ್ದುವು. ಅವುಗಳಲ್ಲಿಯು ಕೆಲವು ಕುದುರೆಗಳಿಗೆ ಮಾತ್ರ ಬೆಳ್ಳಿಯ ಹಣೆಪಟ್ಟೆಗಳಿದ್ದುವು ಉಳಿದ ಕುದುರೆಗಳಿಗೆ ಬಂಗಾರದ ಇಲ್ಲವೆ ಬಂಗಾರದ ಮುಲಾಮು ಮಾಡಿದ ಹಣೆಪಟ್ಟೆಗಳಿದ್ದುವು. ಇವುಗಳಿಗೆ ನಾನಾ ವರ್ಣದ ಹುರಿರೇಶಿಮೆಯ ಜಾಲರಿಗಳನ್ನು ಕಟ್ಟಿದ್ದರು. ಕಡಿವಾಣ

ಗಳೂ ಇಂತಹ ಹುರಿಚೇಶಿಮೆಯುವೆ. ಕೆಲವು ಕುದುರೆಗಳ ಬೆನ್ನ ಮೇಲೆ ಮಕ್ಕಾಪಟ್ಟಣದ ಮಖಮಲಿನ ಜೂಲುಗಳನ್ನು ಹಾಕಿದ್ದರು. ಆ ಮಖ ಮಲವಾದರೂ ನಾನಾವರ್ಣದ ಕಲಾಕುಸುರಿನ ಕೆಲಸ ಮಾಡಿದಂತ ಹದು. ಜೂಲುಗಳಿಗೂ ಜಾಲರಿಗಳನ್ನು ಹಚ್ಚಿದ್ದರು. ಕುದುರೆಗಳು ನಾನಾತರದ ಅಲಂಕಾರಗಳಿಂದ ಸಿಂಗರಿಸಲ್ಪಟ್ಟಿದ್ದವು. ಕೆಲವು ಕುದುರೆ ಗಳಮೇಲೆ ಸಾಟಿನ ದಮಾಸ್ಕಸದ ರೇಶಿಮೆಯ ವಸ್ತ್ರಗಳೂ ಬೇರೆ ಕೆಲವುಗಳಮೇಲೆ ಚೀನ ಪರ್ಸಿಯಾ ದೇಶದ ಕಿನಕಾಪಿನ ಜೂಲುಗಳೂ ಇದ್ದವು. ಕಾಲಾಳುಗಳಲ್ಲಿಯೂ ರಾವುತರಲ್ಲಿಯೂ ಕೆಲವರು ಮುಲಾಮು ಮಾಡಿದ ರತ್ನಖಚಿತ ಕವಚಗಳನ್ನು ಹಾಕಿಕೊಂಡಿದ್ದರು. ಅವುಗಳ ಅಂಚಿಗೆ ಮುತ್ತುರತ್ನಗಳ ಜಾಲರಿಯನ್ನು ಹಚ್ಚಿದ್ದರು. ಕೆಲವು ಕುದುರೆಗಳ ಮುಂದಲೆಯಲ್ಲಿ ನಾಗರಹಾವಿನ ಹೆಡೆಯಂತಹ ಶಿರೋ ಭೂಷಣಗಳನ್ನು ಹಾಕಿದ್ದರು. ಬೇರೆ ಕೆಲವು ಕುದುರೆಗಳ ಮುಂದಲೆ ಯಲ್ಲಿ ಬೇರೆಬೇರೆ ಪ್ರಾಣಿಗಳ ತಲೆಯ ಆಕಾರದ ಶಿರೋಭೂಷಣ ಗಳಿದ್ದವು. ಕಿನಕಾಪು ಮಖಮಲುಗಳ ಕಲಾಕುಸುರಿನ ಹೊದಿಕೆ ಯುಳ್ಳ ಕವಚಗಳಂತೂ ಅನೇಕ ರಾವುತರ ಮೈಮೇಲಿದ್ದವು. ಹಸಿ ತೊಗಲನ್ನು ಒಂದರಮೇಲೊಂದಿಟ್ಟು ನಡುನಡುವೆ ಕಬ್ಬಿಣದ ತಗಡು ಗಳನ್ನು ಹಾಕಿ ಈ ಕವಚಗಳನ್ನು ಮಾಡಿರುತ್ತಾರೆ. ಇವುಗಳಲ್ಲಿಯ ಕೆಲವು ತಗಡುಗಳಿಗೆ ಬಂಗಾರದ ಮುಲಾಮು ಮಾಡಿಸಿರುವರು. ಕೆಲವರು ಬೆಳ್ಳಿಯ ಕವಚಗಳನ್ನು ಧರಿಸಿದ್ದರು. ಅವರ ತಲೆಯ ಮೇಲೆ ಶಿರಸ್ತ್ರಾಣಗಳಿದ್ದವು. ಕುತ್ತಿಗೆಯ ರಕ್ಷಣಾರ್ಥವಾಗಿ ಅವುಗಳ ಹಿಂಭಾಗಕ್ಕೆ ತೂಗಾಡುವ ತಗಡುಗಳನ್ನು ಹಚ್ಚಿದ್ದರು. ಮೋರೆಯ ರಕ್ಷಣಾರ್ಥವಾಗಿ ಮುಂಭಾಗದಲ್ಲಿಯೂ ಪಟ್ಟಿಗಳಿದ್ದವು. ಈ ಶಿರ ಸ್ತ್ರಾಣಗಳನ್ನಾದರೂ ಕವಚಗಳಂತೆಯೇ ಸಿದ್ಧಪಡಿಸಿರುತ್ತಾರೆ. ಅವರು

ಶಿರಸ್ತ್ರಾಣಗಳನ್ನಲ್ಲದೆ ಕನ್ನಡಿಯಂತೆ ಮಿಂಚುವ ಕಂಠಕವಚಗಳನ್ನೂ ಧರಿಸಿದ್ದರು. ಅವುಗಳಲ್ಲಿ ಕೆಲವು ಬಂಗಾರದ ಮುಲಮಿನವು; ಕೆಲವು ಬೆಳ್ಳಿಬಂಗಾರಗಳ ತಗಡು ಜೋಡಿಸಿದ ರೇಶಿಮೆಯವು; ಕೆಲವು ಉಕ್ಕಿನವು ಅವರ ನಡುವಿನಲ್ಲಿ ಕತ್ತಿಕಠಾರಿಗಳು, ಚಿಕ್ಕಚಿಕ್ಕ ಪರಶುಗಳು ಇದ್ದುವು. ಕೈಯಲ್ಲಿ ಭಲ್ಲೆ ಬರ್ಚಿಗಳಿದ್ದುವು. ಇವೆಲ್ಲವುಗಳ ಹಿಡಿಕೆಗಳು ಬೆಳ್ಳಿಬಂಗಾರದವು. ಅವರ ತಲೆಯ ಮೇಲೆ ಜರತಾರಿಯ ಕುಸುರುಕೆಲಸ ಮಾಡಿದ ಮಖಮಲಿನ ಛತ್ರಗಳಿದ್ದುವು. ಕೈಯಲ್ಲಿಯ ಪತಾಕೆಗಳಿಗೆ ನಾನಾವರ್ಣದ ಚೌರಿಗಳನ್ನು ಕಟ್ಟಿದ್ದರು. ಈ ಪತಾಕೆಗಳಿಗೆ ಈ ಜನರು ಬಹಳ ಮರ್ಯಾದೆ ಕೊಡುವರು.

ಆನೆಗಳ ಮೇಲೆಯೂ ಕುದುರೆಗಳಂತೆಯೇ ಜರದ ಕಲಾಕುಸರಿನ ಕೆಲಸವುಳ್ಳ ಮಖಮಲಿನ ಜೂಲುಗಳಿದ್ದುವು. ಅವುಗಳಿಗೂ ಜಾಲರಿಗಳನ್ನು ಹಚ್ಚಿದ್ದರು. ಅಲ್ಲದೆ ಬೇರೆಬೇರೆ ವರ್ಣಗಳ ಬಟ್ಟೆಗಳೂ ಇದ್ದುವು. ಅವುಗಳ ಎರಡೂ ಬದಿಗೆ ಗಂಟೆಗಳು ತೂಗಾಡುತಿದ್ದುವು ಆ ಗಂಟೆಗಳ ನಾದದಿಂದ ಭೂಮಿಯು ಅದಿರುತಿದ್ದಿತು. ಅವುಗಳ ಗಂಡಸ್ಥಳಗಳ ಮೇಲೆ ತರತರದ ಚಿತ್ರಗಳನ್ನೂ ಮೂರ್ತಿಗಳನ್ನೂ ಬರೆದಿದ್ದರು. ಒಂದೊಂದು ಆನೆಯ ಮೇಲೆ ಮೂರು ನಾಲ್ಕು ಜನರು ಕುಳಿತಿದ್ದರು ಅವರೆಲ್ಲರು ಯುದ್ಧಕ್ಕೆ ಸಜ್ಜಾದವರಂತೆಯೆ ಉಡುಪು ತೊಡಪುಗಳನ್ನು ಧರಿಸಿದ್ದರು. ಕವಚವನ್ನು ಹಾಕಿಕೊಂಡು ಕೈಯಲ್ಲಿ ಭಾಲೆಬರ್ಚಿಗಳನ್ನು ಹಿಡಿದುಕೊಂಡಿದ್ದರು. ಕಾಲಾಳುಗಳಿಗಂತೂ ಲೆಕ್ಕವೇ ಇಲ್ಲ. ಕೊಳ್ಳದಿನ್ನೆಗಳು ಬಯಲು ಬೆಟ್ಟಗಳು ಎಲ್ಲವೂ ಕಿಕ್ಕಿರಿದು ಹೋಗಿದ್ದುವು. ಇಂತಹ ದೃಶ್ಯವು ಜಗತ್ತಿನಲ್ಲಿ ಬೇರೊಂದು ಕಡೆಯಲ್ಲಿ ದೃಷ್ಟಿಗೆ ಬೀಳುವುದು ಅಪರೂಪ. ಅವರು ಧರಿಸಿದ ಉಡುಪುಗಳು ಬಹು ಬೆಲೆಯುಳ್ಳವುಗಳು. ಇವುಗಳನ್ನವರು

ಎಲ್ಲಿಂದ ತಂದಿರುವರೆಂಬುದನ್ನೂ ಅವುಗಳಲ್ಲಿ ಇಂತಿಷ್ಟೇ ಬಣ್ಣಗಳಿರುವುವೆಂಬುದನ್ನೂ ನಾನು ಹೇಳಲು ಶಕ್ತನಿಲ್ಲ ಸೈನಿಕರ ಕೈಯಲ್ಲಿಯ ಕೆಲವು ಢಾಲುಗಳಮೇಲೆ ನಾನಾತರದ ಬೆಳ್ಳಿಬಂಗಾರಗಳ ಹೂಗಳನ್ನು ಕೂಡಿಸಿದ್ದರು. ಕೆಲವುಗಳ ಮೇಲೆ ವ್ಯಾಘ್ರಾದಿವನ್ಯಪಶುಗಳ ಮುಖಗಳಾಕೃತಿಗಳನ್ನು ಕೂಡಿಸಿದ್ದರು. ಕೆಲವುಗಳ ಮೇಲೆ ಎಲೆಬಳ್ಳಿಗಳನ್ನು ಕೊರೆದ ಬೆಳ್ಳಿಯ ತಗಡುಗಳನ್ನು ಹೊದಿಸಿದ್ದರು. ಕೆಲವುಗಳನ್ನು ಹಾಗೆಯೆ ತಿಕ್ಕಿ ಒಪ್ಪ ಹಾಕಿ ಬಿಟ್ಟಿದ್ದರು. ಅವು ಕನ್ನಡಿಯಂತೆ ಮಿರುಗುತಿದ್ದುವು. ಅವರ ಖಡ್ಗಗಳ ಮೇಲಿನ ಕೆಲಸವಂತೂ ಅಪ್ರತಿಮವಾಗಿದ್ದಿತು. ಅಂತಹದು ಬೇರೊಂದು ಕಡೆಗೆ ಕಾಣಸಿಗುವುದು ಕಷ್ಟ. ಬಿಲ್ಲಾಳುಗಳ ಬಿಲ್ಲುಗಳ ಮೇಲೆಯೂ ಬೆಳ್ಳಿಬಂಗಾರದ ಕೆಲಸವು ಕಂಡುಬರುತಿದ್ದಿತು. ಅವು ಚೆನ್ನಾಗಿ ಒಪ್ಪ ಹಾಕಿದಂತಹವಿದ್ದುವು. ಅವರ ಬಾಣಗಳು ಸುಂದರವಾದುವುಗಳೂ ಸರಳವಾಗಿ ರೆಕ್ಕೆಗಳುಳ್ಳಂತಹವೂ ಇರುವವು. ಅವನ್ನು ಸರಿಗಟ್ಟುವ ಬಾಣಗಳನ್ನು ನಾನು ಬೇರೆಲ್ಲಿ ಕಂಡಿಲ್ಲ. ನಡುಪಟ್ಟಿಯಲ್ಲಿ ಕಠಾರಿಗಳೂ ಪರಶುಗಳೂ ಇದ್ದುವು. ಅವುಗಳ ಹಿಡಿಕೆಗಳೂ ಕಾವುಗಳೂ ಚಿತ್ರದ ಕೆಲಸ ಮಾಡಿದ ಬೆಳ್ಳಿಬಂಗಾರದ ತಗಡುಗಳಿಂದ ಹೊದಿಸಿದುವುಗಳೇ ಆಗಿದ್ದುವು. ಬಂದೂಕು ಪಿಡಿಮದ್ದು ಸಣ್ಣತೋಪುಗಳನ್ನು ಹಿಡಿದುಕೊಂಡವರ ಮೈಯಲ್ಲಿ ಕವಚದಂತಹ ಡಗಲಿಗಳೇ ಇದ್ದುವು. ಅವರ ಆಯುಧಗಳಾದರೂ ಸುವ್ಯವಸ್ಥಿತವಾಗಿದ್ದುವು. ಒಟ್ಟಿನಲ್ಲಿ ಈ ಜನರ ಮುಖಮುದ್ರೆ, ಸಿಲ್ಲುವ ಠೀವಿ, ಕೈಯಲ್ಲಿಯ ಶಸ್ತ್ರಾಸ್ತ್ರಗಳು ಎಲ್ಲವೂ ಶೂರರಿಗೆ ಒಪ್ಪುವಂತಹವೇ ಆಗಿದ್ದುವು.

ಇದೆಲ್ಲ ನೋಟವು ಅಪೂರ್ವವೂ ನೋಡತಕ್ಕಂತಹದೂ ಆಗಿದ್ದಿತು. ಮುಸಲ್ಮಾನ ಜನರೂ ಇದರಲ್ಲಿ ಭಾಗಿಗಳಾಗಿದ್ದರು.

ಅವರೂ ತಮ್ಮ ಭಾರಿ ಬರ್ಚಿ ಢಾಲು ತುರ್ಕೀಧನುಷ್ಯ ಸಿಡಿಗುಂಡು ಮೊದಲಾದ ಶಸ್ತ್ರಾಸ್ತ್ರಗಳನ್ನು ಸಂಗಡ ತಂದಿದ್ದರು. ಉತ್ತಮ ಶಸ್ತ್ರಾಸ್ತ್ರಗಳನ್ನು ಇಟ್ಟುಕೊಂಡು ಅವುಗಳನ್ನು ಚೆನ್ನಾಗಿಯೇ ಉಪಯೋಗಿಸಬಲ್ಲ ಈ ಜನರನ್ನು ನೋಡಿ ನನಗೆ ಪರಮಾಶ್ಚರ್ಯವಾಯಿತು.

ಈ ಮೊದಲು ನಾನು ವರ್ಣನೆ ಮಾಡಿದ ಪಟ್ಟದ ಕುದುರೆಯ ಮೇಲಿನ್ದ್ದನೀಗ ಅರಸು. ಅವನ ಮೈಮೇಲೆ ಬಿಳಿಯ ಉಡುಪುಗಳಿದ್ದವು. ಆಗಿನ ಪ್ರಸಂಗಕ್ಕುಚಿತವಾದ ಭೂಷಣಾಲಂಕಾರಗಳನ್ನು ಧರಿಸಿದ್ದನು. ಅವನ ಎರಡೂ ಬದಿಗಳಲ್ಲಿ ಕೆಂಪು ಮಖಮಲಿನ ಎರಡು ಛತ್ರಗಳಿದ್ದವು. ಸಾಮಾನ್ಯ ವೇಳೆಯಲ್ಲಿಯ ಅರಸನ ವಸ್ತ್ರಾಲಂಕಾರಗಳನ್ನು ನೋಡಿದವನೇ ಊಹಿಸಿ ತಿಳಿದುಕೊಳ್ಳಬಹುದು ಇಂತಹ ಪ್ರಸಂಗದಲ್ಲಿ ಅವನ ಮೈಮೇಲೆ ಎಂತಹ ಬೆಲೆಯುಳ್ಳ ವಸ್ತ್ರಾಲಂಕಾರಗಳಿದ್ದುವೆಂಬುದನ್ನು. ಈಗ ಅರಸನ ಕೂಡ ಸರದಾರರೂ ಮಾನಕರಿಗಳೂ ಮಾಂಡಲಿಕರೂ ಇದ್ದರು. ಅವರ ವೈಭವವನ್ನು ಯಥಾಸ್ಥಿತವಾಗಿ ವರ್ಣಿಸುವುದು ನನಗೆ ಶಕ್ಯವಿಲ್ಲ. ಒಂದು ವೇಳೆ ವರ್ಣಿಸಿದರೂ ಅದರ ಮೇಲೆ ವಿಶ್ವಾಸ ವಿಡಲಿಕ್ಕಿಲ್ಲ. ಅದಕಾಗಿ ಆ ಗೊಡವೆಗೆ ನಾನು ಹೋಗುವುದಿಲ್ಲ. ಒಂದರ ಮುಂದೊಂದು ಅಡ್ಡ ಬಂದುದರಿಂದ ಸಿಂಗರಿಸಿದ ಕುದುರೆಗಳೆಲ್ಲವು ಕಾಣುತಿರಲಿಲ್ಲ. ಅದೆಲ್ಲವನ್ನು ನೋಡಿ ಬೆರಗಾಗಿ ಹೋದೆನು. ಅದೆಲ್ಲದರ ಯಥಾರ್ಥವರ್ಣನೆಯನ್ನು ಮಾಡುವದು ನನಗೆ ಶಕ್ಯವೆ ಇಲ್ಲ. ಆ ವರ್ಣನೆಯನ್ನು ಮಾಡುವುದಕ್ಕೆ ಶಬ್ದಗಳೇ ನನಗೆ ದೊರೆಯುವುದಿಲ್ಲ. ನಾನು ಕುದುರೆಯ ಮೇಲೆ ಕುಳಿತಿದ್ದೆನು. ಆಚ್ಚರಿಯಿಂದ ನೋಡುವಾಗ ನನ್ನ ಮೈಮೇಲೆ ಎಚ್ಚರವೇ ಇರಲಿಲ್ಲ. ಅದೆಲ್ಲಿ ಕುದುರೆಯ ಮೇಲಿಂದ ಬೀಳುವೆನೊ ಎನಿಸುತಿದ್ದಿತು. ಈ ಉತ್ಸವದ ಸಿದ್ಧತೆಗಾಗಿ ಅದೆಷ್ಟೊ ಹಣವು

ಹೆಚ್ಚವಾಗಿದ್ದಿತು. ಆ ಹಣವನ್ನವರು ಎಲ್ಲಿಂದ ತಂದಿದ್ದರೆಂಬುದರ ಬಗ್ಗೆ ಆಶ್ಚರ್ಯಪಡುವಕಾರಣವಿಲ್ಲ. ಈ ದೇಶವೇ ಅಷ್ಟೊಂದು ಸಧನವಾಗಿದೆ. ಇಲ್ಲಿಯ ಸರದಾರರು ಮಾಂಡಲಿಕರು ಎಲ್ಲರೂ ಒಳ್ಳೇ ಶ್ರೀಮಂತರಿರುವರು.

ಅರಸನ ಮುಂದುಗಡೆ ಸಿಂಗರಿಸಿದ ಅದೆಷ್ಟೋ ಆನೆಗಳು ನಡೆದಿದ್ದುವು. ಅವುಗಳ ಹಿಂದೆ ಬಂಗಾರದ ಕಸೀದೆಯ ವಸ್ತ್ರಗಳಿಂದಲೂ ಬೆಲೆಯುಳ್ಳ ಅಲಂಕಾರಗಳಿಂದಲೂ ಸಿಂಗರಿಸಿದ ಇಪ್ಪತ್ತುನಾಲ್ಕು ಕುದುರೆಗಳು ನಡೆದಿದ್ದುವು ಇವೆಲ್ಲವು ತಮ್ಮ ಒಡೆಯನ ವೈಭವವನ್ನು ಚೆನ್ನಾಗಿಯೇ ತೋರಿಸುತಿದ್ದುವು. ಅರಸನ ಕೊಂದಿಗೆ ಒಂದು ಡೋಲಾರಿಯು--ಪಂಜರವು--ಇತ್ತು. ಅದು ಲಿಸ್ಬನ್ ಪಟ್ಟಣದಲ್ಲಿಯ ಕಾರ್ಪೋ-ಡಿ-ಡಿಯೋ ಉತ್ಸವದ ಮೆರವಣಿಗೆಯ ಕಾಲದಲ್ಲಿಯ ಡೋಲಾರಿಯಂತಿದ್ದಿತು. ಅದು ಬಹು ದೊಡ್ಡದಾಗಿದ್ದಿತು, ಅದನ್ನು ತಾಮ್ರದಿಂದಲೊ ಬೆಳ್ಳಿಯಿಂದಲೊ ಮಾಡಿರಬಹುದು. ಮೇಲೆ ಬಂಗಾರದ ಮುಲಾಮು ಮಾಡಿದ್ದರು. ಒಂದೊಂದು ಬದಿಗೆ ಎಂಟೆಂಟರಂತೆ ಹದಿನಾರು ಜನರು ಅದನ್ನು ಹೊತ್ತಿದ್ದರು. ನಡುನಡುವೆ ಬದಲಿಸುವ ಸಲುವಾಗಿ ಬೇರೆಯವರೂ ಇದ್ದರು. ಈಮೊದಲು ವರ್ಣಿಸಿದ ಮೂರ್ತಿಯನ್ನದರಲ್ಲಿ ಕುಳ್ಳಿರಿಸಿದ್ದರು.

ಈ ರೀತಿ ಒಳ್ಳೇ ಸಡಗರದಿಂದ ಅರಸು ತನ್ನ ಸೈನ್ಯವನ್ನು ನೋಡುತ್ತ ನಡೆದಿದ್ದನು. ಅವನನ್ನು ಕಂಡಕೂಡಲೆ ಜನರೆಲ್ಲರು ಜಯಘೋಷ ಮಾಡುತಿದ್ದರು. ಆ ಕಾಲದಲ್ಲಿ ಢಾಲಿನ ಮೇಲಾಗುವ ಖಡ್ಗಗಳ ಆಘಾತದಿಂದಲೂ ಕುದುರೆಗಳ ಹೇಂಕಾರದಿಂದಲೂ ಆನೆಗಳ ಗೀಳಿನಿಂದಲೂ ಜನರ ಜಯಘೋಷದಿಂದಲೂ ಉಂಟಾದ ನಾದದಿಂದ ಪಟ್ಟಣವು ದುಮುದುಮಿಸುತಿದ್ದಿತು. ಅದೆಲ್ಲಿ ಪಟ್ಟಣವು ತಿರುಗಿ

ಬೀಳುವುದೊ ಎಂಬಂತಾಗಿತ್ತು. ತೋಫುಕುಬಾಕಿಗಳ ಸಪ್ಪಳಿನಿಂದ ಗಟ್ಟಬೆಟ್ಟಗಳು ದರಿಕಂದರಗಳು, ಗದಗದಿಸಿ ಹೋಗಿದ್ದುವು. ಬಯಲಿನಲ್ಲಿ ಸಿಡಿಮದ್ದು ಬಾಣ ಬಿರುಸುಗಳನ್ನು ಹಚ್ಚುತಿದ್ದರು. ಅದೊಳ್ಳೆ ಪ್ರೇಕ್ಷಣೀಯವಾಗಿದ್ದಿತು. ಆಗ ಭೂಮಂಡಲದ ಮೇಲಿನ ಜನರೆಲ್ಲರು ಇಲ್ಲಿಯೇ ಕಲೆತಿರುವರೇನೊ ಎಂಬಂತೆ ತೋರುತಿದ್ದಿತು.

ಇಂತಹ ಅದ್ವಿತೀಯ ವೈಭವದಿಂದ ಅರಸು ನಾನು ಮೊದಲು ಹೇಳಿದ ಮಂಟಪಕ್ಕೆ ಬಂದನು. ಅಲ್ಲಿ ಪದ್ಧತಿಗನುಸರಿಸಿ ದೇವದರ್ಶನ ಪೂಜೆ ಪ್ರಾರ್ಥನೆಗಳು ನಡೆದುವು.

ಅರಸನು ಮುಂದೆ ಹೋದಕೂಡಲೆ ಸೈನಿಕರಿಗೆ ಹೋಗಲು ಅಪ್ಪಣೆಯಾಗುತ್ತದೆಂದು ತಿಳಿಯಬೇಡಿರಿ. ಅರಸು ತಿರುಗಿ ಹೋಗುವವರೆಗೂ ಅವರು ಹಾಗೆಯೇ ನಿಂತಿರುವರು. ಪೂಜೆ ಪ್ರಾರ್ಥನೆಗಳನ್ನು ಮುಗಿಸಿಕೊಂಡು ಅರಸು ಮೊದಲಿನಂತೆ ಕುದುರೆಯಮೇಲೆ ಏರಿ ಪಟ್ಟಣದೊಳಗೆ ಹೋಗುವನು. ಆಗ ಸಹ ದಂಡಿನವರೆಲ್ಲರು ಜಯಘೋಷ ಮಾಡುತಿದ್ದರು ಅರಸು ಮುಂದೆ ಹೋದಂತೆ ಹಿಂದಿನ ಸೈನ್ಯಕ್ಕೆ ಮನೆಗೆ ಹೋಗಲು ಅಪ್ಪಣೆಯಾಗುತಿದ್ದಿತು. ಗಟ್ಟಬೆಟ್ಟಗಳ ಮೇಲಿನ ದರಿಕಂದರಗಳೊಳಗಿನ ಸೈನಿಕರು ತಿರುಗಿ ಹೋಗುವ ಮುಂದೆ ಆನಂದದಿಂದ ಕೇಕೆ ಹಾತಿದ್ದರು. ಜಯಘೋಷ ಮಾಡುತಿದ್ದರು. ಆಯುಧಗಳನ್ನು ಜಳಪಿಸುತಿದ್ದರು. ಢಾಲಿನ ಮೇಲೆ ಶಸ್ತ್ರಗಳಿಂದ ಹೊಡೆಯುತಿದ್ದರು. ಅದನೆಲ್ಲ ನೋಡುವಾಗ ಇದೇನು ಕನಸೊ ನೆನಸೊ ಎಂದು ಭ್ರಾಂತಿಯಾಗುತಿದ್ದಿತು. ಸೇನೆಯೆಲ್ಲವೂ ಬಿಡಾರಕ್ಕೆ ಹೊರಟುಹೋಯಿತು. ಸೇನಾನಾಯಕರು ಮಾತ್ರ ಅರಸನನ್ನು ಅರಮನೆಯವರೆಗೆ ಮುಟ್ಟಿಸಿ ಹಿಂದೆರಳಿದರು.

ಈ ಅರಸನ ಹತ್ತಿರ ೧೦ ಲಕ್ಷ ಸೈನ್ಯವು ಯಾವಾಗಲೂ ಸಿದ್ಧ

ವಿರುತ್ತದೆ. ಇದರಲ್ಲಿ ಚಿಲಖತ್ತು ಹಾಕಿಕೊಳ್ಳುವ ರಾವುತರೇ ೩೫ ಸಾವಿರ ಜನರಿರುವರು. ಈ ಎಲ್ಲ ಸೈನ್ಯವು ಅರಸನಿಂದ ಸಂಬಳ ಹೊಂದುವಂತಹದಿದ್ದು ಕರೆದಾಗ ಕರೆದಲ್ಲಿ ದಂಡೆತ್ತಿಹೋಗಲು ಸಿದ್ಧ ವಿರುತ್ತದೆ. ನಾನಲ್ಲಿ ಇರುವಾಗ ಒಂದು ಬಂದರದಿಂದ ಕಳುಹಿದ ಸೈನ್ಯವನ್ನು ಪ್ರತ್ಯಕ್ಷ ನೋಡಿದೆನು. ಆ ಸೈನ್ಯದಲ್ಲಿ ೫೦ಜನ ಸೇನಾಪತಿಗಳ ಕೈಕೆಳಗೆ ಕೂಡಿ ಒಂದೂವರೆ ಲಕ್ಷಸೈನಿಕರಿದ್ದರು. ಈ ಅರಸನ ಕೈಕೆಳಗೆ ಅನೇಕ ಆನೆಗಳು ಇರುವವು. ಸಾಮ್ರಾಜ್ಯದ ಸೀಮೆಯ ಮೇಲಿನ ಮೂವರೂ ಪ್ರತಿಪಕ್ಷದವರಿಗೆ ತನ್ನ ಕೈಚಳಕವನ್ನು ತೋರಿಸಬೇಕೆಂದು ಅರಸು ಬಯಸಿದರೆ ಅದೊಂದೇ ವೇಳೆಯಲ್ಲಿ ೨೦ ಲಕ್ಷದ ವರೆಗೆ ದಂಡುಕೂಡಿಸಲು ಸಮರ್ಥನಿರುವನೆಂದು ಹೇಳುತ್ತಾರೆ. ಆದರಿಂದಲೆ ಈ ದೇಶದಲ್ಲಿಯ ಎಲ್ಲ ಅರಸರೂ ಅವನಿಗೆ ಅಂಜಿ ನಡೆಯುತ್ತಾರೆ. ಸಾಮ್ರಾಜ್ಯದಲ್ಲಿಯ ಇಷ್ಟೊಂದು ಜನರು ದಂಡಿನಲ್ಲಿ ಇರುವುದರಿಂದ ಬೇರೊಂದು ಕೆಲಸಕ್ಕೆ ಜನರ ಕೊರತೆಯಿರುವುದೆಂದು ಮಾತ್ರ ತಿಳಿಯಬೇಡಿರಿ. ಈ ಪ್ರದೇಶವೇ ಅಷ್ಟೊಂದು ಜನರಿಂದ ಕಿಕ್ಕಿರಿದು ಹೋಗಿದೆ. ಆದರಿಂದ ಪರರಾಜ್ಯದ ಮೇಲೆ ಸಾಗಿ ಹೋದಾಗಲೂ ರಾಜ್ಯದೊಳಗಿನ ಎಲ್ಲ ವ್ಯವಹಾರಗಳು ಸುಸೂತ್ರವಾಗಿ ನಡೆಯುವುವು. ಇದಕ್ಕೆ ಕಾರಣವೆಂದರೆ ಈ ರಾಜ್ಯದಲ್ಲಿ ವ್ಯಾಪಾರವು ಬಹಳ. ಆದರಿಂದ ವ್ಯಾಪಾರಿಗಳ ಸಂಖ್ಯೆ ಹೆಚ್ಚಾಗಿರುವುದು. ಅದರಂತೆ ಕೂಲಿಕಾರರ ಸಂಖ್ಯೆಯೂ ಇನ್ನಿತರ ಕೆಲಸ ಮಾಡುವವರ ಸಂಖ್ಯೆಯೂ ಹೆಚ್ಚಾಗಿರುವುದು ಸಹಜವೇ ಇದೆ. ಇದಲ್ಲದೆ ಒಕ್ಕಲತನ ಮಾಡುವ ಜನ ಬೇರೆ. ಬ್ರಾಹ್ಮಣರ ಸಂಖ್ಯೆಯೂ ಹೆಚ್ಚಾಗಿದೆ. ಅವರು ಮಾಂಸಾದಿ ಪದಾರ್ಥಗಳನ್ನು ಮುಟ್ಟುವುದಿಲ್ಲ. ಶಸ್ತ್ರಧಾರಣೆಯ ವಿಷಯದಲ್ಲಿಯೂ ಅಭಿರುಚಿ ಕಡಿಮೆಯವರಿಗೆ; ಇಲ್ಲ

ಕಂಡರೂ ಅಡ್ಡಿಯಿಲ್ಲ.

ಇಲ್ಲಿಯ ಅರಸು ಇಷ್ಟೊಂದು ಪ್ರಚಂಡ ಸೈನ್ಯಕ್ಕೆ ಸಂಬಳ ಕೊಟ್ಟು ಹಿಡಿದಿರುವನು. ಇದಲ್ಲದೆ ಅರಸನ ಪೋಷಣೆಗೊಳಪಟ್ಟ ಸರದಾರ ಮಾಂಡಲಿಕರು ಬೇರೆ ಸೈನ್ಯವನ್ನಿಟ್ಟಿರುವರು. ಇಷ್ಟೊಂದು ವೆಚ್ಚವನ್ನು ಸಹಿಸುವ ಅರಸನಲ್ಲಿ ಸಂಪತ್ತೆಷ್ಟಿರಬಹುದೆಂದೂ ಪ್ರಶ್ನೆ ಬರಬಹುದು. ಈ ಸೈನ್ಯದ ಮೇಲಿನ ಸೇನಾಪತಿಗಳೆಲ್ಲರು ಅರಸನ ಮಾಂಡಲಿಕರೂ ಸರದಾರರೂ ಇರುವರು. ಅವರವರ ಸೀಮೆಯ ಉತ್ಪನ್ನವೆಲ್ಲ ಅವರಿಗೆಯೆ ಸಲ್ಲುತ್ತದೆ ಅವರಲ್ಲಿ ಹತ್ತುಹದಿನೈದು ಲಕ್ಷ ಹೊನ್ನು ಉತ್ಪನ್ನವುಳ್ಳವರದೆಷ್ಟೊ ಜನ. ಲಕ್ಷೆರಡುಲಕ್ಷ ಉತ್ಪನ್ನವುಳ್ಳವರಿಗಂತೂ ಲೆಕ್ಕವೆ ಇಲ್ಲ. ಪ್ರತಿಯೊಬ್ಬರು ಇಂತಿಷ್ಟು ಕಾಲಾಳುಗಳನ್ನು, ಇಂತಿಷ್ಟು ರಾವುತರನ್ನು ಇಡಬೇಕೆಂದು ಅರಸು ಗೊತ್ತುಮಾಡಿಕೊಟ್ಟಿರುವನು. ಅರಸನು ಕರೆದಾಗ ಸಿದ್ಧವಿರಬೇಕಾಗುವುದೀ ಸೈನ್ಯ. ಅದರಿಂದ ಹತ್ತು ಲಕ್ಷ ಸೈನ್ಯವು ಯಾವಾಗಲೂ ಸಿದ್ಧವಿರುತ್ತದೆ. ಸೇನಾನಾಯಕರು ಗಟ್ಟಿಮುಟ್ಟಾದ ಜನರನ್ನು ಆರಿಸಿಯೇ ಸೈನ್ಯದಲ್ಲಿ ತೆಗೆದುಕೊಳ್ಳುವರು. ಇದರಿಂದ ಮತ್ತೆಲ್ಲಿಯೂ ದೃಷ್ಟಿಗೆ ಬೀಳದ ಗಟ್ಟಿಮುಟ್ಟ ಜನರಿಲ್ಲಿ ನನ್ನ ದೃಷ್ಟಿಗೆ ಬಿದ್ದರು ಹೆದರಿ ಹಿಂಜರಿಯುವವನೊಬ್ಬನೂ ಅಲ್ಲಿ ಕಾಣಲಿಲ್ಲ ಸರದಾರ ಮಾಂಡಲಿಕರು ಈ ಸೈನ್ಯದ ಪೋಷಣೆ ಮಾಡುವುದಲ್ಲದೆ ಅರಸನಿಗೆ ಕೇವೊಂದು ಗೊತ್ತುಮಾಡಿದ ಕಾಣಿಕೆ ಯನ್ನು ಕೊಡಬೇಕಾಗುವುದು. ಆ ಉತ್ಪನ್ನದಲ್ಲಿ ಅರಸನು ಸ್ವತಃ ಕೆಲವು ಸೈನ್ಯವನ್ನು ಇಟ್ಟಿರುವನು. ಅವನ ಹತ್ತರ ಉತ್ತಮೋತ್ತಮ ವಾದ ಒಂದುನೂರು ಆನೆಗಳೂ ಐನೂರು ಕುದುರೆಗಳೂ ಇರುವುವು. ವಿಜಯನಗರದ ಉತ್ಪನ್ನವೆಲ್ಲ ಈ ಸೈನ್ಯದ ಕಡೆಗೆ ವೆಚ್ಚವಾಗುವುದು. ಈ ಆನೆಕುದುರೆಗಳ, ಇವುಗಳ ಮೇಲಿನ ಆಳುಕೋಳುಗಳ ವೆಚ್ಚವು

ಈ ಮಹಲಿನಲ್ಲಿ ಒಂದು ಮುಖಶಾಲೆಯಿದೆ. ಅದರ ಕಂಬಗಳೆಲ್ಲ ಕಲ್ಲಿನವು. ಉಳಿದುದೆಲ್ಲ ಹಸ್ತಿದಂತಿನ ಕೆಲಸ. ತೊಲೆ ಬೋದುಗೆ ಜಂತೆ ಮೊದಲಾದುವೆಲ್ಲ ಹಸ್ತಿದಂತದವೆ. ತೊಲೆ ಬೋದುಗೆಗಳ ಮೇಲೆ ಕಮಲಹೂಗಳನ್ನು ಕೊರೆದಿದ್ದರು. ಇವೆಲ್ಲವು ಸುಂದರವಾದುವೂ ಬೆಲೆಯುಳ್ಳುವೂ ಇದ್ದುವು. ಇಂತಹ ಕೆಲಸವು ಬೇರೆ ಕಡೆಗೆ ಅಪರೂಪ. ಈ ರಾಜ್ಯದಲ್ಲಿ ಬರುವ ನಾನಾಜಾತಿಯ ಜನರ ಚಿತ್ರಗಳನ್ನು ಈ ಭಾಗದಲ್ಲಿಯೇ ತೆಗೆದಿರುವರು. ಅವುಗಳಲ್ಲಿ ಆಯಾ ಜನರ ಮುಖಮುದ್ರೆ ರೀತಿನಡತೆಗಳೆಲ್ಲವೂ ತದ್ವತ್ತಾಗಿ ಕಂಡುಬರುತ್ತವೆ. ಅದೆಂದೂ ಅಂತಃಪುರವನ್ನು ಬಿಟ್ಟು ಹೊರಬೀಳದ ರಾಣೀವಾಸದ ಸ್ತ್ರೀಯರು ಅರಮನೆಯಲ್ಲಿಯೇ ಈ ಎಲ್ಲ ಜನರ ನಡೆನುಡಿಗಳನ್ನು ತಿಳಿದುಕೊಳ್ಳಲು ಅನುಕೂಲವಾಗಿದೆ. ಈ ಚಿತ್ರಗಳಲ್ಲಿ ಬೇರೆ ಬೇರೆ ದೇಶದ ಕುರುಡಕುಂಟರ ಚಿತ್ರಗಳು ಭಿಕ್ಷುಕರ ಚಿತ್ರಗಳು ಸಹ ಇರುವವು.

ಈ ಕೊಟಡಿಯಲ್ಲಿ ಬಂಗಾರದ ಎರಡು ಸಿಂಹಾಸನಗಳಿದ್ದುವು. ಮೇಲುಹೊದಿಕೆ ಹಾಕಿದ ಬೆಳ್ಳಿಯ ಮಂಚವೊಂದಿರುವುದು ಇಲ್ಲಿ ಪಚ್ಚದ ಚಪ್ಪಟೆಯಾದ ಬೆಲೆಯುಳ್ಳ ತುಂಡುವೊಂದಿದೆ. ಅದೊಂದು ಮಹತ್ವದ ವಸ್ತುವೆಂದು ತಿಳಿಯಲ್ಪಡುವುದು. ಈ ಕೊಟಡಿಗೆ ಹೊಂದಿರುವ ಕವಾನಿನಲ್ಲಿ ಒಳಗೆ ಹೋಗುವ ಬಾಗಿಲವದೆ. ಅದರ ಹೊಂದಿಗಿದ್ದ ಚಿಕ್ಕಬಾಗಿಲವೊಂದು ಇಕ್ಕಿದ್ದಿತು. ಅದು ಹಿಂದಿನ ಅರಸನೊಬ್ಬನ ಭಂಡಾರವೆಂದು ಹೇಳಿದರು.

ಈ ಕೊಟಡಿಯಿಂದ ಹೊರಬಿದ್ದು ನಾವು ಒಂದು ಚೌಕವನ್ನು ಪ್ರವೇಶಿಸಿದೆವು. ವನ್ಯಪಶುಗಳು ದ್ವಂದ್ವಯುದ್ಧ ಮಾಡುವಷ್ಟು ವಿಸ್ತೀರ್ಣವಾಗಿದ್ದಿತದು. ಎಲ್ಲ ಕಡೆಗೂ ಗಚ್ಚಿನ ಗಿಲಾಯಿ ಮಾಡಿದ್ದರು.

ತಂದೆಯು ತುಸು ಹೆಚ್ಚು ಕಪ್ಪಾಗಿಯೂ ಸದೃಢನಾಗಿಯೂ ಎತ್ತರ ವಾಗಿ ಹುರಿಕಟ್ಟಾಗಿಯೂ ಇದ್ದನೆಂದು ಹೇಳಬಹುದು. ಈ ಪ್ರತಿಮೆ ಗಳಿಗೆ ಅವರು ಯಾವಾಗಲೂ ತೊಡುತಿದ್ದ ವಸ್ತ್ರಪ್ರಾವರಣಗಳಂತಹ ವಸ್ತ್ರಪ್ರಾವರಣಗಳನ್ನೇ ತೊಡಿಸಿರುವರು.

ಈ ಬಾಗಿಲಿನಿಂದ ಮುಂದೆ ಹೋಗಲುದ್ಯುಕ್ತರಾಗಲು ಮತ್ತೊಮ್ಮೆ ನಮ್ಮ ಗಣತಿಯಾಯಿತು ನಾವೊಂದು ಸಣ್ಣ ಕೊಟಡಿಯನ್ನು ಸೇರಿ ದೆವು. ಅಲ್ಲಿಯ ವಸ್ತುಗಳನ್ನು ನೋಡತೊಡಗಿದೆವು. ಒಳಗೆ ಹೋಗು ವುದರೊಳಗೆ ಎಡಗಡೆಗೆ ಎರಡಂತಸ್ತಿನ ಮನೆಯು ಹತ್ತುವುದು. ಅದರ ಕೆಳ ಅಂತಸ್ತು ತಗ್ಗಿನಲ್ಲಿದ್ದು ಎರಡು ಮೆಟ್ಟಲುಗಳನ್ನಿಳಿದು ಹೋಗ ಬೇಕಾಗುತ್ತದೆ. ಆ ಮೆಟ್ಟಲುಗಳಿಗೆ ನುಲಮುಮಾಡಿದ ಹಿತ್ತಾಳಿಯ ತಗ ಡುಗಳನ್ನು ಹೊದಿಸಿರುವರು. ಒಳಗೆ ನೆಲದಿಂದ ಛತ್ತಿನ ವರೆಗೆ ಆದೆ ಲ್ಲಿಯೂ ಬಂಗಾರದ ತಗಡುಗಳನ್ನು ಕೂಡಿಸಿರುವರು. ಇದರ ಹೊರಗೆ ಚೌಕೋನಾಕಾರದ ಮಂಟಪವಿರುವುದು. ಅದು ಬೆತ್ತದ ಜಾಳಿಗೆಯಿಂದ ಹೆಣೆದುದು. ಮುತ್ತು ಮಾಣಿಕ ಮೊದಲಾದ ತರತರದ ರತ್ನಗಳಿಂದ ಬಳ್ಳಿಗಳನ್ನು ಮಾಡಿರುವರು. ಅದರ ಮೇಲೆ ಎರಡು ಬಂಗಾರದ ಗುಂಡುಗಳನ್ನು ಜೋಲು ಬಿಟ್ಟಿರುವರು. ಈ ಮಂಟಪದಲ್ಲೊಂದು ಮಂಚವಿರುತ್ತದೆ. ಆದರ ಕಾಲುಗಳು ಮಂಟಪದ ಕಂಬದ ಆಕಾರ ದವೆ. ಆ ಮಂಚದ ನಾಲ್ಕೂ ಬದಿಗೆ ಗೇಣು ಎತ್ತರ ಬಂಗಾರದ ಕಟಾಂಜನವಿದ್ದಿತು. ಅದರ ಮೇಲೆ ಕರಿ ಕುತನಿಯ ಗಾದಿಯನ್ನು ಹಾಸಿ ದ್ದರು. ಮೇಲೆ ಮೇಲುಹೊದಿಕೆ ಹಾಕಿದ ಎರಡು ದಿಂಬುಗಳನ್ನಿಟ್ಟಿದ್ದರು.

ಮೇಲ್ಮಾಳಿಗೆಯ ಮೇಲೆ ಏನಿದ್ದಿತೋ ತಿಳಿಯಲಿಲ್ಲ. ಅದು ನೋಡಲು ದೊರೆಯಲಿಲ್ಲ. ಬಲಗಡೆಗಿರುವ ಕೆಳಅಂತಸ್ತಿನ ಮಹಲು ನೋಡಲು ದೊರೆಯಿತು.

ಈ ಮಹಲಿನಲ್ಲಿ ಒಂದು ಮುಖಶಾಲೆಯಿದೆ. ಅವರ ಕಂಬಗಳೆಲ್ಲ ಕಲ್ಲಿನವು. ಉಳಿದುದೆಲ್ಲ ಹಸ್ತಿದಂತಿನ ಕೆಲಸ. ತೊಲೆ ಬೋದುಗೆ ಜಂತೆ ಮೊದಲಾದುವೆಲ್ಲ ಹಸ್ತಿದಂತದವು. ತೊಲೆ ಬೋದುಗೆಗಳ ಮೇಲೆ ಕಮಲಹೂಗಳನ್ನು ಕೊರೆದಿದ್ದರು. ಇವೆಲ್ಲವು ಸುಂದರವಾದುವೂ ಬೆಲೆಯುಳ್ಳುವೂ ಇದ್ದುವು. ಇಂತಹ ಕೆಲಸವು ಬೇರೆ ಕಡೆಗೆ ಅಪರೂಪ. ಈ ರಾಜ್ಯದಲ್ಲಿ ಬರುವ ನಾನಾಜಾತಿಯ ಜನರ ಚಿತ್ರಗಳನ್ನು ಈ ಭಾಗದಲ್ಲಿಯೇ ತೆಗೆದಿರುವರು. ಅವುಗಳಲ್ಲಿ ಆಯಾ ಜನರ ಮುಖಮುದ್ರೆ ರೀತಿನಡತೆಗಳೆಲ್ಲವೂ ತದ್ವತ್ತಾಗಿ ಕಂಡುಬರುತ್ತವೆ. ಅದೆಂದೂ ಅಂತಃಪುರವನ್ನು ಬಿಟ್ಟು ಹೊರಬೀಳದ ರಾಣೀವಾಸದ ಸ್ತ್ರೀಯರು ಅರಮನೆಯಲ್ಲಿಯೇ ಈ ಎಲ್ಲ ಜನರ ನಡೆನುಡಿಗಳನ್ನು ತಿಳಿದುಕೊಳ್ಳಲು ಅನುಕೂಲವಾಗಿದೆ. ಈ ಚಿತ್ರಗಳಲ್ಲಿ ಬೇರೆ ಬೇರೆ ದೇಶದ ಕುರುಡಕುಂಟರ ಚಿತ್ರಗಳು ಭಿಕ್ಷುಕರ ಚಿತ್ರಗಳು ಸಹ ಇರುವವು.

ಈ ಕೊಟಡಿಯಲ್ಲಿ ಬಂಗಾರದ ಎರಡು ಸಿಂಹಾಸನಗಳಿದ್ದುವು. ಮೇಲುಹೊದಿಕೆ ಹಾಕಿದ ಬೆಳ್ಳಿಯ ಮಂಚವೊಂದಿರುವುದು ಇಲ್ಲಿ ಪಚ್ಚದ ಚಪ್ಪಟೆಯಾದ ಬೆಲೆಯುಳ್ಳ ತುಂಡುವೊಂದಿದೆ. ಅದೊಂದು ಮಹತ್ವದ ವಸ್ತುವೆಂದು ತಿಳಿಯಲ್ಪಡುವುದು. ಈ ಕೊಟಡಿಗೆ ಹೊಂದಿರುವ ಕಮಾನಿನಲ್ಲಿ ಒಳಗೆ ಹೋಗುವ ಬಾಗಿಲವದೆ. ಅದರ ಹೊಂದಿಗಿದ್ದ ಚಿಕ್ಕಬಾಗಿಲವೊಂದು ಇಕ್ಕಿದ್ದಿತು. ಅದು ಹಿಂದಿನ ಅರಸನೊಬ್ಬನ ಭಂಡಾರವೆಂದು ಹೇಳಿದರು.

ಈ ಕೊಟಡಿಯಿಂದ ಹೊರಬಿದ್ದು ನಾವು ಒಂದು ಚೌಕವನ್ನು ಪ್ರವೇಶಿಸಿದೆವು. ವನ್ಯಪಶುಗಳು ದ್ವಂದ್ವಯುದ್ಧ ಮಾಡುವಷ್ಟು ವಿಸ್ತೀರ್ಣವಾಗಿದ್ದಿತದು. ಎಲ್ಲ ಕಡೆಗೂ ಗಚ್ಚಿನ ಗಿಲಾಯಿ ಮಾಡಿದ್ದರು.

ಮಧ್ಯಭಾಗದಲ್ಲಿ ಎರಡು ಕಂಬಗಳನ್ನು ನಿಲ್ಲಿಸಿ ಮೇಲೆ ತೊಲೆ ಹಾಕಿದ್ದರು. ಕಂಬತೊಲೆಗಳೆಲ್ಲವು ಮುಲಮುಮಾಡಿದ ಹಿತ್ತಾಳಿಯ ತಗಡುಗಳಿಂದ ಹೊದಿಸಲ್ಪಟ್ಟದ್ದುವು. ತೊಲೆಯ ಮಧ್ಯದಲ್ಲಿರುವ ಕೊಂಡೆಗಳಿಗೆ ಜೋಕಾಲಿಯನ್ನು ಕಟ್ಟುವಂತೆ ಬೆಳ್ಳಿಯ ಸರಪಳಿಗಳನ್ನು ಹಚ್ಚಿದ್ದರು. ಇವು ಅರಸಿಯರ ಸಲುವಾಗಿ ಕಟ್ಟುವ ಜೋಕಾಲಿಯೆಂದು ತೋರುತ್ತದೆ. ಈ ಚೌಕನ್ನು ದಾಟಿ ಮತ್ತೊಂದು ಇಂತಹ ಸುಂದರವಾದ ಕೊಟಡಿಗೆ ಹೋದೆವು. ಅದೂ ಒಂದು ಅಂತಸ್ತಿನ ಮಾಳಿಗೆಯ ಮನೆ. ಅಲ್ಲೊಂದು ಸಭಾಮಂಟಪವಿದ್ದಿತು. ಅದರ ಕಂಬಗಳು ಕಲ್ಲಿನವು. ಮೇಲ್ಭಾಗವೂ ಕಲ್ಲಿನದೆ. ಎಲ್ಲಭಾಗವು ಕಲ್ಲುಕಟ್ಟಿಗೆಯದಾಗಿದ್ದರೂ ಅದರ ಮೇಲೆ ಬಂಗಾರದ ತಗಡುಗಳನ್ನು ಹೊದಿಸಿದಂತೆ ಕಾಣುತಿತ್ತು.

ಈ ಸಭಾ ಮಂಟಪದ ಮುಖದಲ್ಲಿ ನಟ್ಟನಡುವೆ ನಾಲ್ಕು ಕಂಬಗಳ ಮೇಲೆ ಒಂದು ಮಂಟಪವಿರುವುದು. ಅದರಲ್ಲಿ ನರ್ತಕಿಯರ ಚಿತ್ರಗಳನು ಚಿತ್ರಿಸಿದ್ದರು. ನಡುನಡುವೆ ಕಲ್ಲಿನಲ್ಲಿ ಕೊರೆದ ಚಿಕ್ಕ ಚಿಕ್ಕ ಮೂರ್ತಿಗಳನ್ನು ಕೂಡಿಸಿದ್ದರು. ಆ ಮೂರ್ತಿಗಳು ಮುಲಮು ಮಾಡಿದಂತಹವು. ಅವುಗಳ ಸುತ್ತಲು ಹೂಬಳ್ಳಿಗಳ ಸುಳಿವು ಕೊರೆದಿರುವರು. ಈ ಸುಳುವಿನ ಹಿಮ್ಮಗ್ಗುಲಿಗೆ ಒಂದು ತರದ ಕೆಂಪು ಬಣ್ಣವನ್ನು ಕೊಟ್ಟಿರುವರು. ಈ ಮಂಟಪದ ಬದಿಗೊಂದು ಇಕ್ಕಿದ ಬಾಗಿಲವಿರುವುದು ಅದರೊಳಗೆ ದೇವರ ಮೂರ್ತಿ. ಈ ದೇವರ ಉತ್ಸವದ ದಿವಸಗಳಲ್ಲಿ ಉತ್ಸವಮೂರ್ತಿಯನ್ನು ಮೆರಿಸುತ್ತ ತಂದು ಈ ಮಂಟಪದಲ್ಲಿ ಸುವರ್ಣ ಸಿಂಹಾಸನದಲ್ಲಿ ಕೂರಿಸುವರು. ಆಗ ಬ್ರಾಹ್ಮಣರು ಪೂಜಾರ್ಚನೆಗಳನ್ನು ನಡಿಸುವರು. ದೇವರ ಮುಂದೆ ನೃತ್ಯಗೀತಗಳು ನಡೆಯುವವು.

ಈ ಚೌಕಿನಿಂದಿಳಿದು ಎಡಬದಿಯ ಬಂಕದಲ್ಲಿ ಹೋದೆವು. ಅಲ್ಲಿಯೂ

ಬಹು ಬೆಲೆಯುಳ್ಳ ಅನೇಕ ವಸ್ತುಗಳನ್ನು ಕಂಡೆವು. ಅಲ್ಲೊಂದು ತೂಗುಮಂಚ. ಬೆಳ್ಳಿಯ ಸರಪಳಿಗಳಿಂದ ಕಟ್ಟಿದ್ದರದನ್ನು. ಅದರ ಕಾಲುಗಳು ಬಂಗಾರದವು. ಮೇಲ್ಭಾಗವೆಲ್ಲ ಬಂಗಾರದ ತಗಡುಗಳಿಂದ ಹೊದಿಸಲ್ಪಟ್ಟಿದೆ. ಆದರಲ್ಲಿ ಮಾಡಿದಂತಹ ಕಲಾಕೌಶಲ್ಯವನ್ನು ಬೇರೆ ಕಡೆಗೆ ಕಾಣುವುದು ಅಪರೂಪ. ಈ ಬಂಕದಿಂದ ಮುಂದೆ ಹೋದರೆ ಇನ್ನೊಂದು ಕೊಟಡಿ. ಅದರ ಹೊರಬದಿಗೆ ಗೋಡೆಯ ಮೇಲೆ ಧನುಷ್ಯಬಾಣಗಳನು ಹಿಡಿದ ವೀರಸ್ತ್ರೀಯರ ಚಿತ್ರಗಳನ್ನು ತೆಗೆದಿರುವರು. ಈ ಕೊಟಡಿಗೆ ಬಣ್ಣಕೊಡುವ ಕೆಲಸವು ಇನ್ನೂ ನಡೆದಿದ್ದಿತು. ಅದು ಅರಮನೆಯ ಇನ್ನಿತರ ಕಡೆಯ ಕೆಲಸವನ್ನು ಮೀರಿಸುವಂತೆ ಆಗುವುದಿದೆಯೆಂದೂ ಕೊಟಡಿಯ ನೆಲ ಗೋಡೆಗಳಿಗೆಲ್ಲ ಬಂಗಾರದ ತಗಡು ಹೊದಿಸುವುದಿದೆಯೆಂದೂ ಸಂಗಡಿಗರು ಹೇಳಿದರು. ಈ ಕೊಟಡಿಯ ಆಚೆಗೆ ಎತ್ತರ ಮಳಿಗೆಯೊಂದು. ಆದರಲ್ಲಿ ನಾವು ಪ್ರವೇಶಿಸಿದೆವು. ಅದರ ಮೂಲೆಯೊಂದರಲ್ಲಿ ಬಂಗಾರದ ಮೂರು ದೊಡ್ಡ ತಪ್ಪೇಲಿಗಳನ್ನಿರಿಸಿದ್ದರು. ಪ್ರತಿಯೊಂದರಲ್ಲಿ ಅರ್ಧ ಖಂಡಗ ಅಕ್ಕಿಯ ಅನ್ನವು ಸಹಜವಾಗಬಹುದು. ಅಲ್ಲಿ ಬಂಗಾರ ಬೆಳ್ಳಿಯ ಸಣ್ಣದೊಡ್ಡ ತಪ್ಪೇಲಿಗಳು ಮತ್ತಿತರ ಪಾತ್ರೆಗಳು ಇನ್ನೂ ಹಲವಿದ್ದುವು. ಈ ಮಳಿಗೆಯಲ್ಲಿಯ ಸೋಪಾನವನ್ನೇರಿ ಚಿಕ್ಕದೊಂದು ಬಾಗಿಲಿನಿಂದ ನಾವು ಮೇಲಂತಸ್ತಿನ ಕೊಟಡಿಯೊಂದರಲ್ಲಿ ಹೋದೆವು. ಅದು ಅರಮನೆಯಲ್ಲಿಯ ನೃತ್ಯಶಾಲೆ. ಅರಸಿಯರು ನೃತ್ಯವನ್ನು ಕಲಿಯುವುದಕ್ಕೆ ಬರುವುದಲ್ಲಿಗೆಯೆ. ಅಲ್ಲಿಯ ಕಲ್ಲಿನ ಕಂಬಗಳಲ್ಲಿ ಮೂರ್ತಿಗಳನ್ನು ಕೊರೆದಿರುವರು. ಆ ಕಂಬದಲ್ಲಿಯ ಮೂರ್ತಿಗಳು ಬದಿಯ ಗೋಡೆಗಳಿಂದ ಎರಡು ಮೊಳ ಮುಂದೆ ಬಂದಿವೆ. ಎರಡು ಕಂಬಗಳ ನಡುವಿನ ಅಂತರ ಸುಮಾರು ಮೂರು ಮೊಳ. ಆ ಶಾಲೆಯ

ತುಂಬೆಲ್ಲ ಇಂತಹ ಕಂಬಗಳಿವೆ. ಅವೆಲ್ಲವುಗಳ ಅರ್ಧ ಅರ್ಧ ಭಾಗವೆ ಕಾಣುತಿರುತ್ತದೆ. ಎಲ್ಲವುಗಳ ಮೇಲೆಯೂ ಬಂಗಾರದ ಮುಲಮು ಮಾಡಿರುವರು. ಕಂಬಗಳಲ್ಲಿ ಕೊರೆದ ಆನೆ ಸಿಂಹಗಳ, ಇನ್ನಿತರ ಪಶುಗಳ, ನಡುವಿನ ಭಾಗವು ಕೊರೆದು ತೆಗೆದಂತಹದಿರುವುದರಿಂದ ಅದರ ಕಿಂಡಿಗಳೊಳಗಿಂದ ಆಚೆಯ ಅಂತಹ ಚಿತ್ರಗಳನು ಸಹಜ ನೋಡಬಹುದು. ಕೊರೆದ ಮೂರ್ತಿಗಳೆಲ್ಲ ಒಂದು ವಿವಕ್ಷಿತ ಸ್ಥಿತಿಯನ್ನು ತೋರಿಸುವಂತಹವಿದ್ದುವು. ಎರಡೆರಡು ಕಂಬಗಳ ನಡುವೆ ಮನುಷ್ಯ ಪ್ರಮಾಣದ ಮೂರ್ತಿಗಳನ್ನು ಕೊರೆದು ಅವುಗಳ ಮೇಲೆ ಬಂಗಾರದ ಮುಲಮು ಮಾಡಿರುವರು.

ಕಂಬಗಳ ಮೇಲೆಯೂ ಕಮಾನುಗಳ ಮೇಲೆಯೂ ಕೊರೆದ ಚಿತ್ರಗಳಲ್ಲಿ ಯಾವುದೊಂದು ನೃತ್ಯದ ಕೊನೆಯಲ್ಲಿ ನರ್ತಕಿಯರು ನಿಲ್ಲುವ ರೀತಿಯನ್ನೂ ಬೇರೆ ಬೇರೆ ತರದ ನೃತ್ಯಗಳನ್ನೂ ತೋರಿಸಿದೆ. ಇದರಿಂದ ನೃತ್ಯದ ಪಾಠವು ತನ್ನಿಂದ ತಾನೆ ದೊರೆಯುತಿರುವುದು. ಕಲಿಯುವಾಗ ಮರೆಯಲು ಆಸ್ಪದವೇ ಇಲ್ಲ. ಯಾವ ರೀತಿಯಲ್ಲಿ ಅವಯವಗಳನ್ನು ಚಲಿಸಬೇಕೆಂಬುದು ಆದಾಗಲೆ ಲಕ್ಷ್ಯದಲ್ಲಿ ಬರುತ್ತದೆ.

ಈ ನೃತ್ಯಶಾಲೆಯ ಒಂದು ಬದಿಗೆ ಬಣ್ಣಕೊಟ್ಟು ಸಿದ್ಧ ಪಡಿಸಿದ ಸ್ಥಳವೊಂದಿದೆ. ನೃತ್ಯಕಲಿಯುವ ಸ್ತ್ರೀಯರು ತಮ್ಮ ಶ್ರಮಪರಿಹಾರ ಮಾಡಿಕೊಳ್ಳುವ, ಚಪಲತೆಯು ಹುಟ್ಟುವಸಲುವಾಗಿ ವ್ಯಾಯಾಮ ಮಾಡುವ ಸ್ಥಳವಿದು. ಬೇರೊಂದು ಬದಿಗೆ ನೃತ್ಯಕಲಿಸುತ್ತಿರುವಾಗ ಅರಸನು ಕುಳಿತುಕೊಂಡು ನೋಡುವುದಕ್ಕಾಗಿ ಆಸನವೊಂದಿಟ್ಟಿರುವರು. ಆ ಸ್ಥಳದ ನೆಲಗೋಡೆಗಳನೆಲ್ಲ ಬಂಗಾರದ ತಗಡುಗಳಿಂದ ಹೊದಿಸಿ ರುವರು. ಗೋಡೆಯ ಮಧ್ಯಭಾಗದಲ್ಲಿ ಸುಮಾರು ಹನ್ನೆರಡು ವರ್ಷ ವಯಸ್ಸಿನ ಕನ್ನಿಕೆಯ ಬಂಗಾರದ ಪ್ರತಿಮೆ. ಆದೊಂದು ವಿಶಿಷ್ಟ

ಪ್ರಕಾರದ ನರ್ತನದ ವೇಳೆಯಲ್ಲಿ ಇರಬೇಕಾದ ಸ್ಥಿತಿಯಲ್ಲಿ ಆ ಪ್ರತಿಮೆಯನ್ನು ನಿಲ್ಲಿಸಿರುವರು.

ಅರಮನೆಯ ಉಳಿದ ಭಾಗವನ್ನು ನಮಗೆ ನೋಡಗೊಡಲಿಲ್ಲ. ಅರಸಿಯರ ಮಹಲುಗಳಲ್ಲಂತೂ ಪರಪುರುಷರ ಪ್ರವೇಶವೇ ಆಗುವಂತಿಲ್ಲ. ಅಲ್ಲಿರುವವರು, ದಾಸಿಯರು ಇಲ್ಲವೆ ಷಂಢಸೇವಕರು. ಇಲ್ಲಿಂದಲೇ ನಾವು ಹೋದ ಹಾದಿಯಿಂದ ತಿರುಗಿ ಮೊದಲಿನ ಮಹಾದ್ವಾರಕ್ಕೆ ಬಂದೆವು. ಅಲ್ಲಿ ಮತ್ತೊಮ್ಮೆ ನಮ್ಮ ಗಣತಿಯಾಯಿತು."

× × × × × ×

ಇಂತಹ ವೈಭವ ಸಂಪನ್ನವಾದ ನಮ್ಮ ಕರ್ಣಾಟಕ ಸಾಮ್ರಾಜ್ಯವು ಸ್ಥಾಪನೆಯಾಗಿ ಕ್ರಿ. ಶ. ೧೯೩೬ಕ್ಕೆ ಆರುನೂರು ವರ್ಷಗಳಾಗುವುವು. ಆ ಕಾಲದಲ್ಲಿ ಆ ಸಾಮ್ರಾಜ್ಯದ ಪುಣ್ಯಸ್ಮರಣೆ ಮಾಡಬೇಕೆಂಬ ಕಲ್ಪನೆಯು ಕೆಲವರಲ್ಲೀಗ ಒಡಮೂಡಿದೆ. ಕನ್ನಡಿಗರೆಲ್ಲರು ಕೂಡಿ ತಮ್ಮ ಸಾಮ್ರಾಜ್ಯದ-ಕರ್ಣಾಟಕ ಸಾಮ್ರಾಜ್ಯದ-ಪುಣ್ಯಸ್ಮರಣೆಯನ್ನು ಅದರ ವೈಭವಕ್ಕೆ ತಕ್ಕ ರೀತಿಯಲ್ಲಿ ಜರುಗಿಸುವರೆ?

---

# ಅನುಬಂಧ

# ವಿಜಯನಗರ ರಾಜರ ವಂಶಾವಳಿ.

## ೧ ಸಂಗಮವಂಶ

( ಕ್ರಿ. ಶ. ೧೩೩೬—೧೪೭೮, ೧೪೨ ವರ್ಷ. )

ಸಂಗಮ

ಅರಸಿ—ಕಾಮಾಂಬಿಕಾ




(ಮುಂದಿನ ಪುಟದಲ್ಲಿ)

ಹಿಂದಿನ ಪುಟದಿಂದ




## ೨ ಸಾಳುವ ವಂಶ

(೧೪೭೮—೧೪೯೬—, ೧೮ ವರ್ಷ)

(೧೦) ಸಾಳುವನರಸಿಂಹ

(೧೪೭೮-೧೪೯೩)

(೧೧) ಇಮ್ಮಡಿನರಸಿಂಹ

೧:೯.-೯೬

## ೨ ತುಳುವ ವಂಶ

೧೪೯೬-೧೫೭, ೭೧ ವರ್ಷ

ತಿಮ್ಮ
(ಹೆಂಡತಿ-ದೇವಕಿ)

|

ಈಶ್ವರ
(ಹೆಂಡತಿ-ಬುಕ್ಕಮ್ಮ)

|

(೨) ನರಸ-ನರಸಿಂಗ
(೧೪೯೬-೧೫೦೩)

|

ತಿಪ್ಪಮ್ಮನಿಂದ — ನಾಗಲಾದೇವಿಯಿಂದ — ಓಬಾಂಬಿಕೆಯಿಂದ

ತಿಪ್ಪಮ್ಮನಿಂದ:
(೩) ವೀರನರಸಿಂಹ
ಭುಜಬಲರಾಯ
(೧೫೦೪-೧೫೦೯)

ನಾಗಲಾದೇವಿಯಿಂದ:
(೪) ಕೃಷ್ಣರಾಯ
(೧೫೦೯-೧೫೨೯)
ಮಗಳು ತಿರುಮಲಾಂಬಾ
ಪತಿ ರಾಮರಾಯ

ಓಬಾಂಬಿಕೆಯಿಂದ:
(೫) ಅಚ್ಯುತರಾಯ
(೧೫೩೦ ೧೫೪೨)
|
(೬) ವೆಂಕಟದೇವರಾಯ
೧೫೪೨

ರಂಗ
ಅರಸ ತಿಮ್ಮಾಂಬಾ
|
(೭ ಸದಾಶಿವರಾಯ
(೧೫೪೨-೧೫೬೭)

## ೪ ಅರವೀಡು ರಾಜವಂಶ

೧೫೬೭ ರಿಂದ ೧೬೬೪

ಬುಕ್ಕ (ಬಲ್ಲಾಂಬಿಕಾ)

|

(ರಾಮರಾಜ–ಲಕ್ಕಾಂಬಿಕಾ)

|

ಶ್ರೀರಂಗ (ತಿರುಮಲಾದೇವಿ

|

- ಅಳಿಯರಾಮರಾಯ — ತಿರುಮಲಾಂಬಾ — ೧೫೬೫ ರಲ್ಲಿ ಮರಣ
  - ಶ್ರೀರಂಗ
    - ೨೨ ವೆಂಕಟಪತಿರಾಯ II — ಪೆದ್ದವೆಂಕಟ — (೧೬೩೦-೧೬೪೦)
    - ಚಿನ್ನವೆಂಕಟ — ಆನೆಗುಂದಿ ವಂಶ
      - ೨೪ ಶ್ರೀರಂಗರಾಯ — ಗೋಪಾಲರಾಯನಿಗೆ ದತ್ತಕ
- (೧೮) ತಿರುಮಲರಾಯ — ಅರಸಿ–ವೆಂಗಲಾಂಬಾ — (೧೫೬೭-೧೫೭೧)
  - ೧೯ ಶ್ರೀರಂಗರಾಯ I — ೧೫೭೨-೮೫
  - ೨೦ ವೆಂಕಟಪತಿರಾಯ I — ೧೫೮೫-೧೬೧೫
    - ಶ್ರೀರಂಗ
      - ೨೧ ರಾಮದೇವ — (೧೬೧೫-೧೬೩೦)
- ವೆಂಕಟಾದ್ರಿ
  - ರಂಗಪ್ಪರಾಜ
    - ಗೋಪಾಲರಾಜ
      - ೨೩ ಶ್ರೀರಂಗರಾಯ II — ದತ್ತಕಪುತ್ರ — ೧೬೪೨-೧೬೬೪

## ಅರವೀಡು ರಾಜವಂಶ

ಮುಂದೆಸಾಗಿದುದು

(ಈಗ ಆನೆಗುಂದಿಯಲ್ಲಿರುವುದು)

ಚಿನ್ನವೆಂಕಟ




ಮುಂದಿನ ಪುಟದಲ್ಲಿ




ತಿರುಮಲ — ಚೆಲ್ಲಮ್ಮ ಮಗಳು

ನರಸಿಂಹ

ಕೇಶವಮ್ಮ ಮಗಳು — ಪೆದ್ದಪಂಪಾಪತಿ — ಚಿನ್ನಪಂಪಾಪತಿ

ರಂಗ

ಚಿನ್ನತಿರುಮಲ — ಲಕ್ಷ್ಮೀದೇವಿ — ತಿರುಮಲ — ಕುಮಾರರಾಘವ

ನರಸಿಂಹ

ವೆಂಕಟ — ಕೃಷ್ಣ ಪತ್ನಿ ಕುಪ್ಪಮ್ಮ

ಇಬ್ಬರು ಹೆಣ್ಣುಮಕ್ಕಳು

ಪಂಪಾಪತಿರಾಯನನ್ನು ದತ್ತಕತೆಗೆದುಕೊಂಡಳು

ಸದಾಶಿವ ಮೃತ — ಕೋದಂಡರಾಯ ಮೃತ — ಕುಪ್ಪಮ್ಮ — ನರಸ ಮೃತ — ಪಂಪಾಪತಿರಾಯ ಕುಪ್ಪಮ್ಮನು ದತ್ತಕತೆಗೆದುಕೊಂಡಳು

ಕುಮಾರರಾಘವ — ಹಿರಿಯಮನೆತನದ ಕೃಷ್ಣರಾಯನಿಗೆ ಕೊಟ್ಟಿತು